# ಸಪ್ತಗಿರಿ

ಆಗಸ್ಟ್ 1983

ಬೆಲೆ ರೂ 1-00



ತಿರುಮಲೆ ತಿರುಪತಿ ದೇವಸ್ಥಾನಗಳ ಮಾಸ ಪತ್ರಿಕೆ



ಶ್ರೀ ಮಹಾಲಕುಮಿ ದೇವಿಯೆ ಕೋಮಲಾಂಗಿಯೆ
ಸಾಮಗಾನ ಪ್ರಿಯೇ ॥ಪ॥

ಹೇಮಗರ್ಭ ಕಾಮಾರಿ ಶಕ್ರ ಸುರಸ್ತೋಮ ವಂದಿತಳೆ
ಸೋಮ ಸೋದರಿಯೆ ॥ಅ ಪ॥

ಬಟ್ಟ ಕುಂಕುಮ ನೊಸಲೊಳೆ ಮುತ್ತಿನ ಹೊಸ ಕಟ್ಟಾಣಿ ತ್ರಿವಳಿಕೊರಳೊಳೆ
ಇಟ್ಟ ಪೊನ್ನೋಲೆ ಕಿವಿಯೊಳೆ ಹವಳದ ಕೈಯಕಟ್ಟು ಕಂಕಣ ಕೈಬಳೆ
ತೊಟ್ಟ ಕುಪ್ಪುಸ ಬಿಗಿದುಟ್ಟ ಪೀತಾಂಬರ ಘಟ್ಟಿ ವಡ್ಯಾಣ ಕಾಲಂದಿಗೆ ರುಳಿಗೆಜ್ಜೆ
ಬೆಟ್ಟಲಿ ಪೊಳೆವುದು ಮೇಂಟಿಕೆ ಕಿರುಪಿಲ್ಲಿ ಇಟ್ಟು ಶೋಭಿಸುವ ಅಷ್ಟ ಸಂಪನ್ನೆ ೧

ಸಕಲ ಶುಭಗುಣಭರಿತಳೆ ಏಕೋದೇವಿಯೆ, ವಾಕು ಲಾಲಿಸಿ ನೀ ಕೇಳೆ
ಮೋಕ ನೀಯನ್ನ ಮಹಲೀಲೆ ಕೊಂಡಾಡುವಂಥ ಏಕಮನವ ಕೊಡು ಶೀಲೆ
ಬೇಕುಬೇಕು ನಿನ್ನ ಪತಿ ಪಾದಾಬ್ಜವ ಏಕಾಂತದಿ ಪೂಜಿಪರ ಸಂಗವ ಕೊಡು
ಲೋಕದ ಜನರಿಗೆ ನಾ ಕರವೊಡ್ಡದಂತೆ ನೀ ಕರುಣಿಸಿ ಕಾಯೆ ರಾಕೇಂದುವದನೆ ೨

ಮಂದರೋದ್ಧರನರಸಿಯೆ, ಈದಿರೆ ಎನ್ನ ಕುಂದುದೋಷಗಳಳಿಯೆ
ಅಂದ ಸೌಭಾಗ್ಯದ ಸಿರಿಯೆ ತಾಯೆ ನಾ ನಿನ್ನ ಕಂದನು ಮುಂದಕ್ಕೆ ಕರೆಯೆ
ಸಿಂಧುಶಯನ ಸಿರಿ ವಿಜಯವಿಠಲರೇಪು ಎಂದೆಂದಿಗೆ ಮನದಿಂದಗಲದೆ ಆ
ನಂದದಿಂದಲಿ ಬಂದು ಮುಂದೆ ಕುಣಿಯುವಂತೆ ವಂದಿಸಿ ಪೇಳಮ್ಮ ಸಿಂಧುಸುತೆಯೇ ೩

— ವಿಜಯದಾಸರು

ಸಂದರ್ಶಿಸಿ! ಅನುಗ್ರಹೀತರಾಗಿರಿ!!

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ



## ಬ್ರಹ್ಮೋತ್ಸವ ಕಾರ್ಯಕ್ರಮ
### ಸೆಪ್ಟೆಂಬರ್ 1983

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 9–9–83 | ಶುಕ್ರ | — | ಸೇನಾಪತಿ ಉತ್ಸವ ಅಂಕುರಾರ್ಪಣೆ |
| 10–9–83 | ಶನಿ | ಧ್ವಜಾರೋಹಣ, ತಿರುಚಿ ಉತ್ಸವ | ದೊಡ್ಡ ಶೇಷವಾಹನ |
| 11–9–83 | ಭಾನು | ಚಿಕ್ಕಶೇಷವಾಹನ | ಹಂಸವಾಹನ |
| 12–9–83 | ಸೋಮ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 13–9–83 | ಮಂಗಳ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 14–9–83 | ಬುಧ | ಮೋಹಿನೀ ಅವತಾರ | ಮಕರಕಂಠಿ, ಲಕ್ಷ್ಮೀಹಾರಾದ್ಯಾಭರಣಗಳೊಡನೆ **ಗರುಡವಾಹನ** |
| 15–9–83 | ಗುರು | ಹನುಮದ್ವಾಹನ, ಸಂಜೆ ವಸಂತೋತ್ಸವ | ಗಜವಾಹನ |
| 16–9–83 | ಶುಕ್ರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 17–9–83 | ಶನಿ | **ರಥೋತ್ಸವ** | ಅಶ್ವವಾಹನ |
| 18–9–83 | ಭಾನು | ಅವಭೃತ, ತೀರ್ಥವಾರಿ | ಧ್ವಜಾವರೋಹಣ. |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಂಜೆ ವಿಶೇಷ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ. ಸಂಗೀತ, ಹರಿಕಥೆಗಳ ವಿಶೇಷ ಆಕರ್ಷಣೆಗಳಿರುತ್ತವೆ.

**ತಿರುಮಲೆ ತಿರುಪತಿ ದೇವಸ್ಥಾನಗಳು.**

**ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.**




ಗೌರವ ಸಂಪಾದಕರು :

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.

ಸಂಪಾದಕ :

ಕೆ ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ ಎಸ್ ಶ್ರೀನಿವಾಸನ್ ಎಂ.ಎ.,

ಮುದ್ರಣ

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಚಂದಾದಾರರುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೪] ಆಗಸ್ಟ್ ೧೯೮೩ [ಸಂಚಿಕೆ ೩


# ವಿಷಯಸೂಚಿ

# ಸಂಪಾದಕೀಯ

ಶ್ರಾವಣಮಾಸ ಬರಲಿದೆ. ಇನ್ನು ಮುಂದೆ ಮೂರುತಿಂಗಳ ಕಾಲ ವರಲಕ್ಷ್ಮೀವ್ರತ, ಮಂಗಳಗೌರೀ ವ್ರತ, ದುರ್ಗಾಪೂಜೆ, ಧನಲಕ್ಷ್ಮೀವ್ರತ ಎಂದು ಮುಂತಾಗಿ ಸ್ತ್ರೀ ದೈವಪೂಜೆ ಆರಂಭವಾಗಲಿದೆ. ಹಿಂದೂಗಳ ಹಬ್ಬಗಳ ಸಂಗತಿಯನ್ನೇ ನೋಡಿದರೂ ಪುರುಷದೇವತೆಗಳಷ್ಟೆ ಪ್ರಧಾನ್ಯ ಹೊಂದಿದೆ ಸ್ತ್ರೀದೇವತಾ ಪೂಜೆಯೂ ಕೂಡ. ಶಿವರಾತ್ರಿಯಿಂದ ನವರಾತ್ರಿಯವರೆಗೆ ರಾಮನವಮಿಯಿಂದ ಋಷಿಪಂಚಮಿಯವರೆಗೆ ಒಂದು ಹಾಗೆ ಒಂದು ಹೀಗೆ ಎಂದಂತೆ ಸ್ತ್ರೀ ಪುರುಷ ರೂಪಗಳೆರಡನ್ನೂ ಹಿಂದೂಗಳು ಪೂಜಿಸುತ್ತ ಬಂದಿದ್ದಾರೆ ಇಂತಹ ಒಂದು ದೇವತಾ ಸಮಾನತೆ ಇದ್ದರೂ ಪರಂಪರೆಯ ವಿರುದ್ಧ ದೂರು ನೀಡುತ್ತ ಇಂದಿನ ಸ್ತ್ರೀ ಶೋಷಣೆಗಳಿಗೆ ಧರ್ಮವನ್ನು ದೂಷಿಸುವ ದೋಷವನ್ನು ಮಾಡಲಾಗುತ್ತಿದೆ.

ನಮ್ಮ ಪರಂಪರೆ ವಾಸ್ತವವಾಗಿ ಸ್ತ್ರೀಯನ್ನು ಕೆಳಮಟ್ಟದಲ್ಲಿ ಚಿತ್ರಿಸಿಲ್ಲ, ಕಂಡಿಲ್ಲವೆಂಬುದು ಹತ್ತೊಂಬತ್ತನೆಯ ಶತಕದ ಕೊನೆಯ ಶ್ರೇಷ್ಠ ಸಂತ, ಭಾರತೀಯ ಸಂಸ್ಕೃತಿಯ ಹಿರಿಯ ಪ್ರತಿನಿಧಿ ಎಂದು ಹೆಸರಾದ ವಿವೇಕಾನಂದರು 'ಭಾರತದಲ್ಲಿ ಸ್ತ್ರೀ ಪುರುಷ ಸಮಾನಳಲ್ಲ ಪುರುಷನಿಗಿಂತಲೂ ಮೇಲ್ಮೆ ಹಿರಿಮೆಯನ್ನು ಹೊಂದಿದವಳು' ಎಂದು ಹೇಳಿದ ಮಾತಿನಿಂದ ಸ್ಪಷ್ಟ. ಸನಾತನ ಧರ್ಮದ ಇತಿಹಾಸವೂ ಅದನ್ನೇ ಬೆಂಬಲಿಸುತ್ತದೆ.

ಪ್ರಕೃತಿ ಉಪಾಸಕರಾಗಿದ್ದ ಆದಿಕಾಲದಲ್ಲಿ ಸೂರ್ಯ ದೇವತೆಯೊಂದಿಗೆ ಉಷಾದೇವಿಯನ್ನೂ ಕೊಂಡಾಡಿದ ಸಂಸ್ಕೃತಿ ಋಗ್ವೇದದ್ದು. ಇಂದಿಗೂ 'ಯತ್ರ ನಾರ್ಯಸ್ತು ಪೂಜ್ಯಂತೇ ತತ್ರ ರಮಂತೇ ದೇವತಾಃ' ಎಂಬ ಮನುವಿನ ಮಾತು ಪೂಜ್ಯವಾಗಿದೆ. ಅವನು ಹೇಳಿದ್ದೇ ಎಂದು ಹೇಳಬಹುದಾದ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎನ್ನುವ ಮಾತನ್ನು 'ಸ್ತ್ರೀ ತನ್ನ ಪಾಡನ್ನು ತಾನು ನೋಡಿಕೊಳ್ಳುವಂತಾಗದಿರಲಿ' ಎಂಬ ಅರ್ಥದಲ್ಲಿ, ಮೊದಲಿನ ಮೂರೂ ಅಂಶಗಳನ್ನು ಒಟ್ಟಿಗೆ ತೆಗೆದುಕೊಂಡು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಭರತನ ತಾಯಿ ಶಕುಂತಲೆ ತನ್ನ ಇಚ್ಛೆಯಂತೆ ವಿವಾಹವಾದಾಗ ಅವಳನ್ನು ಕಣ್ವರು ಬಹಿಷ್ಕರಿಸಲಿಲ್ಲವೆಂಬುದೂ ದೂರ್ವಾಸ ಶಾಪದ ಮೂಲಕ ಉಂಟಾದ ದುಷ್ಯಂತ ತಿರಸ್ಕೃತಿಯ ಹೊರತು ಅವಳನ್ನು ಸಮಾಜವೇನೂ ಅಗೌರವದಿಂದ ಕಾಣಲಿಲ್ಲವೆಂಬುದರಲ್ಲಿ ಸ್ಪಷ್ಟ. ಇದು ಕಾಳಿದಾಸನ ಕಾಲಕ್ಕೆ ಸಂಬಂಧಿಸಿದ್ದು. ಗುಪ್ತರ ಕಾಲದ ಸಮಾಜ ಜೀವನವೂ ಸ್ತ್ರೀ ಗೌರವಾರ್ಹಳೆಂಬ ಭಾವನೆಯನ್ನೆ ಬಿಂಬಿಸುತ್ತದೆ. ಮೈತ್ರೇಯಿ, ಗಾರ್ಗಿಯರಂತಹ ಬ್ರಹ್ಮವಾದಿಗಳೂ, ಅಂದಂದಿನ ಸಮಾಜದಲ್ಲಿ ಅತ್ಯಂತ ಪೂಜ್ಯರೇ ಆಗಿ ಬದುಕಿದ್ದರು. ದೂರವೇಕೆ, ನಮ್ಮ ಹತ್ತಿರದವರೇ ಆದ ಮೀರಾಬಾಯಿ, ಅಕ್ಕಮಹಾದೇವಿಯರ ಸಾಧನಾ ಮಾರ್ಗದಲ್ಲಿ ಹೈಂದವ ಸಮಾಜ ಹೊಲಬನ್ನೇನೂ ಕಾಣಲಿಲ್ಲ. 'ಹೆಂಡತಿ ಸಂತತಿ ಸಾವಿರವಾಗಲಿ' ಎಂಬ ದಾಸರ ಹಾರೈಕೆ ಹೆಂಗಸಿನ ಬಗ್ಗೆ ಗೌರವದಿಂದಲ್ಲವೇ ಉಂಟಾದದ್ದು. ಸ್ವಾತಂತ್ರ್ಯ ಸಂಗ್ರಾಮದಲ್ಲೂ ಸ್ತ್ರೀ ಪುರುಷರು ಒಟ್ಟಿಗೆ ಹೋರಾಟ ನಡೆಸುತ್ತಿದ್ದಾಗ ಸ್ತ್ರೀಯ ಬಗ್ಗೆ ಅಗೌರವದ ಮಾತು ಎಲ್ಲೂ ದಾಖಲೆಯಾಗಿಲ್ಲ. ಇನ್ನು ಧರ್ಮದ ಮಾತು.

ಮದುವೆಯಲ್ಲಿ ವರನನ್ನು ನಾರಾಯಣನೆಂದು ಭಾವಿಸಿ ಮಗಳನ್ನು ಧಾರೆಯೆರೆಯುತ್ತಾನೆ ಮಾವ. ಇಬ್ಬರನ್ನೂ ಸೇರಿಸಿ ಲಕ್ಷ್ಮೀನಾರಾಯಣರೆಂದೇ ಭಾವಿಸಲಾಗುತ್ತದೆ. ಅತ್ತೆ ನಾದಿನಿಯರ ಮಧ್ಯೆ ರಾಣಿಯಂತೆ ಶೋಭಾಯಮಾನವಾಗಿ, ಜವಾಬ್ದಾರಿಯುತವಾಗಿ ಗಂಡನ ಮಕ್ಕಳ ಮತ್ತೆಲ್ಲರ ಹಿತವನ್ನು ಕಾಪಾಡಲು ಸೊಸೆಯನ್ನು ಆಹ್ವಾನಿಸಲಾಗುತ್ತದೆ. ಧರ್ಮಾರ್ಥ ಕಾಮಗಳಲ್ಲಿ ಆಕೆಯನ್ನು ಅತಿಕ್ರಮಿಸಲಾರೆ ಎಂದು ಪ್ರತಿಜ್ಞೆಯನ್ನು ಮಾಡುತ್ತಾನೆ ಕೈಹಿಡಿದವ. ಸಪ್ತಪದಿಯ ಒಂದೊಂದು ಹೆಜ್ಜೆಯೂ ಗಂಡು ಹೆಣ್ಣಿಗೆ ನೀಡುವ ಗೌರವ, ಪ್ರೇಮ, ಆದರಗಳ ಘೋಷಣೆಯೇ ಆಗಿದೆ. ಹೆಚ್ಚೇಕೆ ಹೆಂಡತಿಯಿಲ್ಲದೆ ಯಾವುದೇ ಧರ್ಮಕಾರ್ಯವನ್ನೂ ಮಾಡುವಂತಿಲ್ಲ. ಕಡೆಗೆ ಮಗಳನ್ನು ಧಾರೆಯೆರೆಯುವಾಗಲೂ ಹೆಂಡತಿಯಿರಲೇಬೇಕು.

ಇಂಥ ಒಂದು ಶ್ರೇಷ್ಠ ಪರಂಪರೆ ಹಿಂದೆ ಬಿದ್ದು ಇಂದಿನ ಸ್ಥಿತಿಯಲ್ಲಿನ ಸಮಾಜ ತಾನು ಹೊರಗಣಿಂದ ಪಡೆದ ಪ್ರಭಾವ ಪ್ರೇರಣೆಗಳಿಂದ ಹೊಸತನದತ್ತ ನಡೆಯುತ್ತ ಪರಂಪರೆಯ ಮೌಲ್ಯಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನೇ ಮಾಡದೆ ದೂಷಿಸುತ್ತಿರುವ ದೃಶ್ಯವನ್ನು ದಿನನಿತ್ಯವೂ ನೋಡಬಹುದು.

ವರದಕ್ಷಿಣೆ, ವರೋಪಚಾರ, ಹೆಂಡತಿಯ ಶೋಷಣೆ, ಮುಂತಾದುವುಗಳೆಲ್ಲ ಇಂದಿನ ಹೊಸ ಹೊಸ ಸಮಸ್ಯೆಗಳು. ಒಂದೊಮ್ಮೆ ಗೌರವಕ್ಕಾಗಿ ನೀಡುತ್ತಿದ್ದ ಕನ್ಯಾಶುಲ್ಕ ಬರುಬರುತ್ತ ವರದಕ್ಷಿಣೆಯಾಗಿ ಮದುವೆಯಲ್ಲಿ ಹಿರಿಯ ಹೊರೆಯಾಗುತ್ತಿದೆ. ವರೋಪಚಾರ ಕಡ್ಡಾಯವಾಗುತ್ತ ಹೆಣ್ಣಿನ ತಂದೆಯನ್ನು ತಾಯಿಯನ್ನೂ ಸಹ ಸಾಲದ ನೇಣಿಗೆಳೆಯುತ್ತಿದೆ. ಮಗಳ ಕಣ್ಣಲ್ಲೂ ನೀರುತರುತ್ತಿದೆ. ಕಾನೂನು ಇರಬಹುದು, ಇಂತಹ ಸಾಮಾಜಿಕ ಪಿಡುಗುಗಳ ವಿರುದ್ಧ ಕಾನೂನು ಇದ್ದಾಗಲೇ ಇವುಗಳು ಹೆಚ್ಚು ವ್ಯಾಪಕವಾಗುವುದು. ಕಾನೂನಿನ ಶಸ್ತ್ರ ಮಾತ್ರವೇ ಅಲ್ಲ, ಸಾಮಾಜಿಕ ಶಿಕ್ಷಣದ ಶಾಸ್ತ್ರವೂ ಬೇಕು ಇಂತಹ ಅಪಮೌಲ್ಯಗಳ ಪ್ರಾಚುರ್ಯ ನಿರೋಧಕ್ಕೆ. ಈ ಸಾಮಾಜಿಕ ಶಿಕ್ಷಣಕ್ಕೆ ಮನೆಯೇ ಮೊದಲಮೆಟ್ಟಿಲು. ಅಲ್ಲಿಂದಲೇ ಆಗಬೇಕು ಮನಃಪರಿವರ್ತನೆ ಎಂದರೆ – 'ಗೃಹಿಣೀ ಗೃಹಮುಚ್ಯತೇ' – ಅವರಿಂದಲೇ ಆಗಬೇಕು ಕೆಲಸ.

# ಶ್ರೀಕೃಷ್ಣಭಕ್ತಿ

ಪರಮಾತ್ಮನ ದಶಾವತಾರಗಳಲ್ಲಿ ಶ್ರೀರಾಮ, ಶ್ರೀಕೃಷ್ಣ ಅವತಾರಗಳು ಪೂರ್ಣ ಅವತಾರಗಳೆಂದು ಪ್ರಸಿದ್ಧವಾಗಿವೆ. ಇತರ ಅವತಾರಗಳು, ಕಾಲ ದೇಶ, ವರ್ತಮಾನ, ಸಂದರ್ಭಗಳಿಗೆ ತಕ್ಕಂತೆ, ಪರಮಾತ್ಮನ ಸಂಕಲ್ಪಕ್ಕನುಗುಣವಾಗಿ ಕಾಣಿಸಿಕೊಂಡು, ಅವತಾರದ ಉದ್ದೇಶವನ್ನು ಸಫಲಗೊಳಿಸಿ ಕಣ್ಮರೆಯಾಗಿವೆ. ಆದರೆ ರಾಮ, ಕೃಷ್ಣ ಅವತಾರಗಳು ಗರ್ಭದಿಂದ ಜನಿಸಿ, ಬಾಲ್ಯಾದಿಗಳನ್ನು ತೋರಿಸಿ, ವಿದ್ಯಾಭ್ಯಾಸ ಮಾಡಿ, ವಿವಾಹಾದಿ ಸಾಂಸಾರಿಕ ಸಂದರ್ಭಗಳಲ್ಲಿ ಪ್ರವೇಶಿಸಿ, ಶಿಷ್ಟರಕ್ಷಣೆ, ದುಷ್ಟಶಿಕ್ಷೆಮಾಡಿ, ಮಾನವಕೋಟಿಯ ಉದ್ಧಾರಮಾರ್ಗವನ್ನು ಉಪದೇಶಮಾಡಿ, ಮಾರ್ಗದರ್ಶನ ಮಾಡಿದ ಅವತಾರಗಳು.

ಶ್ರೀರಾಮನು, "ಅಹಂ ದಶರಥಾತ್ಮಜಂ ಮಾನುಷಂ ಮನ್ಯೇ" – ನಾನು ದಶರಥರಾಜನ ಮಗನು, ನಾನು ಮನುಷ್ಯ ಎಂದು ತಿಳಿಯಿರಿ ಎಂದು ಹೇಳಿದರೂ, ಮಾನವಾತೀತ ಕಾರ್ಯಗಳನ್ನು ಯಶಸ್ವಿಯಾಗಿ ಮಾಡಿ, ಲೋಕಕಂಟಕರಾಗಿದ್ದ ರಾವಣಾದಿ ರಾಕ್ಷಸರನ್ನು ಧ್ವಂಸಮಾಡಿ, ಶಿಷ್ಟಜನರನ್ನು ರಕ್ಷಿಸಿ, ಮಾನವಕುಲವನ್ನು ಉದ್ಧಾರಮಾಡಿದನು. ಇವನ ಕಥೆಯೇ ಶ್ರೀಮದ್ರಾಮಾಯಣ.

ಶ್ರೀಕೃಷ್ಣಚರಿತ್ರೆ ಶ್ರೀಮದ್ಭಾಗವತದಲ್ಲಿ ನಿರೂಪಿತವಾಗಿದೆ. ಮಹಾಭಾರತ, ಹರಿವಂಶ ವಿಷ್ಣುಪುರಾಣಗಳಲ್ಲಿ ಕೂಡ ಶ್ರೀಕೃಷ್ಣ ಸಂಬಂಧವಾದ ಸಂದರ್ಭಗಳು ತಿಳಿಸಲ್ಪಟ್ಟಿವೆ. ಒಟ್ಟಿನಲ್ಲಿ ಶ್ರೀಕೃಷ್ಣ ಚರಿತ್ರೆ ಬಹು ಭಕ್ತಿ ಪ್ರಧಾನವಾದುದು. ಭಕ್ತರನ್ನು ಉದ್ಧರಿಸುವುದಕ್ಕಾಗಿ ಶ್ರೀಕೃಷ್ಣನು ಅವತರಿಸಿದನು, ಅವನ ಸಾಹಸ ಮತ್ತೂ ಅದ್ಭುತ ಕಾರ್ಯ, ಗೋಪಗೋಪಿಯರ ಮಧ್ಯೆ ಬೆಳೆದು ಅವನು ತೋರಿಸಿದ ಸೌಲಭ್ಯ ಮತ್ತು ಸೌಶೀಲ್ಯ, ಅವನು ಪ್ರದರ್ಶನಮಾಡಿದ ವಿಶ್ವರೂಪ, ಅವನ ಉಪದೇಶವಾಣಿ – ಎಲ್ಲವೂ ಪ್ರಸಿದ್ಧವಾಗಿವೆ, ಭಕ್ತಿ ಪ್ರಚೋದಕವಾಗಿವೆ, ವಿಶ್ವವ್ಯಾಪಕವಾಗಿವೆ. ಅವನು ಭಕ್ತಪರಾಧೀನ ಎಂಬುದಕ್ಕೆ ನೂರಾರು ನಿದರ್ಶನಗಳಿವೆ. "ನರಜನ್ಮ ಬಂದಾಗ, ನಾಲಿಗೆ ಇರುವಾಗ ಕೃಷ್ಣಾ ಎನ್ನ ಬಾರದೇ" ಎಂಬ ದಾಸರವಾಣಿ ಪ್ರಸಿದ್ಧವಾಗಿದೆ.

ಮಹಾಭಾರತದ ಸಭಾಪರ್ವದಲ್ಲಿ ಬರುವ ದ್ರೌಪದೀ ಮಾನಸಂರಕ್ಷಣೆಯ ಸಂದರ್ಭ ಶ್ರೀಕೃಷ್ಣ ಭಕ್ತಿಗೆ ಅದ್ವಿತೀಯ ನಿದರ್ಶನವಾಗಿದೆ. ಕೌರವ ಮಹಾಸಭೆಯಲ್ಲಿ ದ್ರೌಪದೀ ಮಾನಭಂಗ ಮಾಡಲು, ದುಷ್ಟಚತುಷ್ಟಯರು ಪ್ರಯತ್ನಿಸಿದಾಗ ಅವಳು ತನ್ನ ಮಾನಸಂರಕ್ಷಣೆಗಾಗಿ, ಶ್ರೀಕೃಷ್ಣನನ್ನು ಕುರಿತು ಅನನ್ಯಭಕ್ತಿಯಿಂದ ಕೂಗಿಕೊಳ್ಳುವಳು. "ಹೇ! ಕೃಷ್ಣಾ! ದ್ವಾರಕಾವಾಸಿ, ಯಾದವ ನಂದನಾ, ಗತಿವಿಹೀನರಿಗಕಟ, ನೀನೇ ಗತಿಯಲ್ಲೆ, ಗೋವಿಂದ!. ಕರುಣಿ ನೀ ಕೃಷ್ಣ, ಕಾರುಣ್ಯಪಾತ್ರದ ತರಳೆ ನಾ, ಮುಕುಂದ" ಎಂದು ಕೂಗಿ, ಶ್ರೀಕೃಷ್ಣ ಪರಮಾತ್ಮನ ದಿವ್ಯ ಮಂಗಳ ವಿಗ್ರಹವನ್ನು ಸ್ಮರಿಸಿ, ಅದನ್ನು ತನ್ನ ಹೃದಯದಲ್ಲಿ ಸ್ಥಾಪಿಸಿ ಭಕ್ತಿಯಿಂದ ಕೂಗಿಕೊಂಡಳು. ಭಕ್ತಪರಾಧೀನನಾದ ಸ್ವಾಮಿಯು ರುಕ್ಮಿಣೀದೇವಿಯೊಡನೆ ಪಗಡೆಯಾಡುತ್ತಿದ್ದಾಗಲೂ ದ್ರೌಪದಿಯ ಭಕ್ತಿಯ ಮೊರೆಯನ್ನು ಕೇಳಿ, ವಸ್ತ್ರ ಅಕ್ಷಯವಾಗಲಿ ಎಂದು ಸಂಕಲ್ಪಮಾಡಿದನು. ಹಾಗೆಯೇ ಆಯಿತು. ಶ್ರೀಕೃಷ್ಣಭಕ್ತಿಯ ಮಹಿಮೆ ಅಂಥಹುದು.



ಶ್ರೀಕೃಷ್ಣಾವತಾರದಲ್ಲಿ ಕಾಣುವ ಪ್ರಥಮ ಶ್ರೀಕೃಷ್ಣ ಪ್ರದರ್ಶನ, ವಸುದೇವನ ಪ್ರಾರ್ಥನೆ. ಕಂಸನ ಸೆರೆಮನೆಯಲ್ಲಿ ಕಾಳರಾತ್ರಿಯಲ್ಲಿ ಶ್ರೀಕೃಷ್ಣ ಜನನವಾದಕೂಡಲೇ ವಸುದೇವನು ಶಿಶುವನ್ನು ಕಂಡು ಬಹು ಭಕ್ತಿಯಿಂದ ಪ್ರಾರ್ಥಿಸುತ್ತಾನೆ.

ಜನನವಾದ ಶ್ರೀಕೃಷ್ಣನ ಸೌಂದರ್ಯವನ್ನು ಕಂಡು ವಸುದೇವನು ಆಶ್ಚರ್ಯದಿಂದ ಪ್ರಾರ್ಥಿಸುತ್ತಾನೆ ಪರಮಾತ್ಮನ ಕಾರುಣ್ಯವೇ ಸೌಂದರ್ಯದ ಮೂಲ. ಇಂತಹ ಸುಂದರ ರೂಪದಿಂದ ಸ್ವಾಮಿಯು ಚೇತನನದೃಷ್ಟಿ, ಚಿತ್ತಗಳನ್ನು ಆಕರ್ಷಿಸುತ್ತಾನೆ. ಆದುದರಿಂದ ಸ್ವಾಮಿಗೆ ಶ್ರೀಕೃಷ್ಣ ಎಂಬ ನಾಮವು ನಿಜವಾಗಿ ಸಲ್ಲುತ್ತದೆ.

ಶ್ರೀಕೃಷ್ಣನು, ತನ್ನ ಶೈಶವವನ್ನು, ಬಾಲ್ಯವನ್ನೂ ನಂದಗೋಕುಲದಲ್ಲಿ, ನಂದಗೋಪನ ಮನೆಯಲ್ಲಿ ಕಳೆಯುತ್ತಾನೆ. ಇವನ ಸಾಕುತಂದೆ ನಂದಗೋಪ, ಸಾಕುತಾಯಿ ಯಶೋದಾದೇವಿ. ಗೋಪಗೋಪಿಯರ ಮಧ್ಯೆ ಇದ್ದುಕೊಂಡೂ ಕೃಷ್ಣನು ತನ್ನ ಸೌಲಭ್ಯ, ಸೌಶೀಲ್ಯಗಳನ್ನು ತೋರಿಸುತ್ತ ತನ್ನ ಮಹಿಮೆಯನ್ನು ಮರೆಮಾಚಿಕೊಂಡಿರುತ್ತಾನೆ. ಇಂತಹ ಸಾಮಾನ್ಯ ಜನರ ಧನ್ಯತೆಯನ್ನೂ ಭಾಗ್ಯವನ್ನೂ ಚತುರ್ಮುಖ ಬ್ರಹ್ಮನು ಕಂಡು,

ಅಹೋ ಭಾಗ್ಯಂ ಅಹೋ ಭಾಗ್ಯಂ
ನಂದಗೋಪವ್ರಜೌಕಸಾಂ
ಯನ್ಮಿತ್ರಂ ಪರಮಾನಂದಂ
ಪೂರ್ಣಬ್ರಹ್ಮ ಸನಾತನಂ ॥

– ಎನ್ನುತ್ತಾನೆ.

ಗೋಪ ಗೋಪಿಯರು, ಶ್ರೀಕೃಷ್ಣನೊಡನೆ ಇರುತ್ತಿದ್ದರೂ, ಅವನನ್ನು ಕೇವಲ ಮಾನವದೃಷ್ಟಿಯಿಂದ ನೋಡುತ್ತಿರಲಿಲ್ಲ. ಅವನ ಪಾರ್ಶ್ವವನ್ನು ಕಾಣದೇ ಇರಲಿಲ್ಲ. ಕೃಷ್ಣಸಂಹಾರಕ್ಕಾಗಿ ಕಂಸನು ಕಳುಹಿಸಿದ ಪೂತನಿ, ಶಕಟ, ಧೇನುಕ, ನಳಕೂಬರ – ಇತ್ಯಾದಿ ರಾಕ್ಷಸರನ್ನು ಕೃಷ್ಣನು ಸುಲಭವಾಗಿ ಸಂಹರಿಸಿ ತನ್ನ ಪರತ್ವವನ್ನು ಪ್ರದರ್ಶನ ಮಾಡಿದ್ದನು. ಇದರಿಂದ ಗೋಪಗೋಪಿಯರ ಶ್ರೀಕೃಷ್ಣ ಭಕ್ತಿ ಬೆಳೆಯುತ್ತಿದ್ದಿತು. ಸ್ವಾಮಿಯ ಪರತ್ವವನ್ನು ಅವರು ಅರಿತಿದ್ದರು.

"ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ" ಎಂಬ ಗೀತೋಪದೇಶದಂತೆ, ಭಕ್ತನು ಯಾವ ಭಾವವನ್ನು ಹೊಂದಿ ಯಾವರೀತಿಯಲ್ಲಿ ಪರಮಾತ್ಮನ ಅನುಗ್ರಹವನ್ನು ಪ್ರಾರ್ಥಿಸುತ್ತಾನೋ, ಅದಕ್ಕನುಗುಣವಾಗಿ ಸ್ವಾಮಿಯು ಕೃಪೆಮಾಡುತ್ತಾನೆ. ಇದೇ ಭಕ್ತಾನುಗ್ರಹ. ಕೃಷ್ಣಾವತಾರದಲ್ಲಿ ಇಂತಹ ಭಕ್ತಿಮಹಿಮೆಯನ್ನು ಮೊದಲಿನಿಂದ ಕೊನೆಯವರೆಗೆ ಕಾಣುತ್ತೇವೆ. ಇಂತಹ ಭಕ್ತಿಪಾರವಶ್ಯತೆಯನ್ನು ಗೋಪಿಕಾಗೀತೆಯಲ್ಲಿ ಕಾಣಬಹುದು.

**ಶ್ರೀ ಡಿ. ಕೃಷ್ಣ ಅಯ್ಯಂಗಾರ್**

ತವ ಕಥಾಮೃತಂ ತಪ್ತಜೀವನಂ
ಕವಿಭಿರೀಡಿತಂ ಕಲ್ಮಷಾಪಹಂ ॥
ಶ್ರವಣ ಮಂಗಳಂ ಶ್ರೀಮದಾತತಂ
ಭುವಿ ಗೃಣಂತಿ ಯೇ ಭೂರಿದಾ ಜನಾಃ ॥

ಧರ್ಮರಾಜನ ರಾಜಸೂಯ ಕಥಾಸಂದರ್ಭ ಮಹಾಭಾರತದಲ್ಲಿ ನಿರೂಪಿತವಾಗಿದೆ. ಯಾಗವು ಪೂರ್ತಿಯಾಯಿತು. ಕುರುಕುಲ ಪಿತಾಮಹನಾದ ಭೀಷ್ಮನು, ಶ್ರೀಕೃಷ್ಣ ಮಹಿಮೆಯನ್ನು ಚೆನ್ನಾಗಿ ಅರಿತು, ಸಹಸ್ರನಾಮಗಳಿಂದ ಅವನನ್ನು ಸ್ತುತಿಸಿ, ಅಗ್ರಪೂಜೆಯನ್ನು ಸ್ವೀಕರಿಸಬೇಕೆಂದು ಭಕ್ತಿಯಿಂದ ಬೇಡುತ್ತಾನೆ. ಆಗ ದುಷ್ಟನಾದ ಶಿಶುಪಾಲನು ಕೃಷ್ಣನನ್ನು ಅಲ್ಲಗಳೆದು ಅವಿಜ್ಞಾಶಬ್ದಗಳಿಂದ ಕೃಷ್ಣನನ್ನು ದೂಷಿಸುತ್ತಾನೆ. ಭೀಷ್ಮನು ಅವನ ಕಡೆ ಕೈ ಎತ್ತಲು ಕೃಷ್ಣನು ಅವನನ್ನು ತಡೆಯುತ್ತಾನೆ. ಶಿಶುಪಾಲನ ಶತಾಪರಾಧಗಳನ್ನು ಮನ್ನಿಸುತ್ತಾನೆ. ಪರಮದುಷ್ಟನಾದ ಅವನಿಗೆ ಜ್ಞಾನೋದಯವಾಗದಿರಲು, ಶಿಶುಪಾಲನನ್ನು ಸಂಹರಿಸಿ, ಭಕ್ತನ ಪ್ರಾರ್ಥನೆಯಂತೆ ಅಗ್ರಪೂಜೆ ಸ್ವೀಕರಿಸುತ್ತಾನೆ.

ಕುಚೇಲನ ಕೃಷ್ಣಭಕ್ತಿ ಅತಿಶಯವಾದುದು. ಅವನು ಸದಾ ಶ್ರೀಕೃಷ್ಣ ನಾಮಸ್ಮರಣೆ, ಧ್ಯಾನ ಪೂಜೆಯಲ್ಲಿ ನಿರತನಾಗಿದ್ದನು. ತನ್ನ ದಟ್ಟದಾರಿದ್ರ್ಯವನ್ನೂ ಲೆಕ್ಕಿಸುತ್ತಿರಲಿಲ್ಲ. ಹೀಗಿರುವಾಗ ಅವನ ಪತ್ನಿಯು, ಶ್ರೀಕೃಷ್ಣ ದರ್ಶನ ಮಾಡಿಬಂದರೆ, ತಮ್ಮ ದಾರಿದ್ರ್ಯ ಪರಿಹಾರವಾಗುವುದೆಂದು ಅವನಿಗೆ ಸೂಚಿಸಿದಳು. ಪರಮಪುರುಷಾರ್ಥವಾದ ಮೋಕ್ಷವನ್ನು ದಯಪಾಲಿಸುವ ಶ್ರೀಕೃಷ್ಣನಲ್ಲಿ ಕ್ಷುದ್ರ ಪುರುಷಾರ್ಥವಾದ ಐಶ್ವರ್ಯವನ್ನು ಬೇಡುವುದು ಅವನ ಮನಸ್ಸಿಗೆ ಹಿಡಿಸಲಿಲ್ಲ. ಆದರೂ, ಆ ಪರಮಾತ್ಮಸ್ವರೂಪಿಯಾದ ಶ್ರೀಕೃಷ್ಣನನ್ನು ನೋಡಬೇಕೆಂದು ಅವನ ಮನಸ್ಸು ಹಾತೊರೆಯುತ್ತಿತ್ತು.

ಶ್ರೀಕೃಷ್ಣ ನಾಮಸ್ಮರಣೆಯಿಂದ ದ್ವಾರಕಾಪುರಿಯನ್ನು ಕುರಿತು ಪ್ರಯಾಣ ಮಾಡಿದನು. ಸುಮಾರು ಎರಡು ಸಾವಿರ ದಿವ್ಯಭವನಗಳ ಮಧ್ಯೆ ಶ್ರೀವೈಕುಂಠಕ್ಕೆ ಸಮಾನವಾದ ಶ್ರೀಕೃಷ್ಣ ನಿವಾಸವನ್ನು ಕಂಡು ಪರಮ ಹರ್ಷಿತನಾದನು. ಅನನ್ಯ ಭಕ್ತಿಯಿಂದ ಆ ಭವನಕ್ಕೆ ನಮಸ್ಕರಿಸಿದನು.

ಕ್ಷೀರಾಬ್ಧೌ ಕೃತಸಂಸ್ತವಃ
ಸುರಗಣೈರ್ಬ್ರಹ್ಮಾದಿಭಿಸ್ಸೇವಿತೋ ।
ಪ್ರೊದ್ಭೂತೋ ವಸುದೇವ ಸದ್ಮನಿ
ಮುದಾ ಚಿಕ್ರೀಡ ಯೋ ಗೋಕುಲೇ ॥

ಕಂಸಧ್ವಂಸಕೃತೇ ಜಗಾಮ ಮಧುರಾಂ
ಸಾರಾಮ ಸದ್ವಾರಕಾಂ ।
ಗೋಪಾಲೋಽಖಿಲ ಗೋಪಿಕಾ
ಜನಸಖಃ ಪಾಯಾದಪಾಯಾಚ್ಚನಃ ॥

ಬಾಲ್ಯಸಖನಾದ ಶ್ರೀಕೃಷ್ಣನ ಆದರದ ಸ್ವಾಗತ, ಸತ್ಕಾರ, ಉಪಚಾರಾದಿಗಳಿಂದ ಅನುಗ್ರಹೀತನಾದ ಕುಚೇಲನು ಪರಮಹರ್ಷಿತನಾಗಿ, ಶ್ರೀಕೃಷ್ಣನ ಬಲಾತ್ಕಾರಕ್ಕೆ ಒಳಗಾಗಿ, ಒಂದು ಹಿಡಿ ಅವಲಕ್ಕಿಯನ್ನು ಬಹು ಸಂಕೋಚದಿಂದ ಭಕ್ತಿಪೂರ್ವಕ ಶ್ರೀಕೃಷ್ಣನಿಗೆ ಅರ್ಪಿಸಿದನು. ಇದರಿಂದ ಪ್ರೀತನಾದ ಸ್ವಾಮಿಯು ಕುಚೇಲನಿಗೆ ಐಹಿಕ, ಆಮುಷ್ಮಿಕ ಫಲ ಹೇತುಭೂತವಾದ ಸಕಲ ಸಮೃದ್ಧಿಯನ್ನೂ, ಭಗವದ್ಭಕ್ತಿಯನ್ನೂ ಅನುಗ್ರಹಿಸಿದನು.

ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ—ಎಂಬಂತೆ, ಯಾರು ಸರ್ವತ್ರ ಸರ್ವದಾ ಸರ್ವಅವಸ್ಥೆಗಳಲ್ಲಿ ತಾನು ಪರಮಾತ್ಮನಿಗೆ ಸೇರಿದವನು ಎಂದು ಭಕ್ತಿಯಿಂದ ತನ್ನನ್ನು ಪರಮಾತ್ಮನಿಗೆ ಅರ್ಪಿಸಿಕೊಳ್ಳುವನೋ, ಆಗ ಪರಮಾತ್ಮನು ಆ ಭಕ್ತನನ್ನು ಪರಮಹರ್ಷದಿಂದ ಅನುಗ್ರಹಿಸುವನು.

ಕುಲಶೇಖರ ಆಳ್ವಾರರು, ಶ್ರೀಕೃಷ್ಣನ ಪರಮ ಭಕ್ತರು. ತಾವು ರಚಿಸಿರುವ ಮುಕುಂದಮಾಲಾ ಸ್ತೋತ್ರದಲ್ಲಿ ಶ್ರೀಕೃಷ್ಣಭಕ್ತಿಯ ಪ್ರವಾಹವನ್ನು ಹರಿಸಿದ್ದಾರೆ. ಅದರ ಒಂದು ಶ್ಲೋಕ ಹೀಗಿದೆ—

ಕೃಷ್ಣೋ ರಕ್ಷತು ನೋ ಜಗತ್ರಯ ಗುರುಃ
ಕೃಷ್ಣಂ ನಮಸ್ಯಾಮ್ಯಹಂ
ಕೃಷ್ಣೇನಾಮರಶತ್ರವೋವಿನಿಹತಾಃ
ಕೃಷ್ಣಾಯ ತಸ್ಮೈ ನಮಃ ।
ಕೃಷ್ಣಾದೇವ ಸಮುತ್ಥಿತಂ ಜಗದಿದಂ
ಕೃಷ್ಣಸ್ಯ ದಾಸೋಸ್ಮ್ಯಹಂ
ಕೃಷ್ಣೇ ತಿಷ್ಠತಿ ಸರ್ವಮೇತದಖಿಲಂ
ಹೇ! ಕೃಷ್ಣ ರಕ್ಷಸ್ವಮಾಂ ॥

ಶ್ರೀಕೃಷ್ಣಭಕ್ತಿಯು ಸಂಸ್ಕೃತ ಸಾಹಿತ್ಯದಲ್ಲಿ ಉದಾಹರಿಸಲ್ಪಟ್ಟಿರುವಂತೆ, ತಮಿಳು ಸಾಹಿತ್ಯದ ಮುಖ್ಯಭಾಗವಾದ ದಿವ್ಯಪ್ರಬಂಧಗಳಲ್ಲಿ ಅತಿಶಯವಾಗಿ ನಿರೂಪಿಸಲ್ಪಟ್ಟಿದೆ. ಆಳ್ವಾರರು ಪರಮ ಭಕ್ತರು, ಅನುಭಾವಿಗಳು. ಭಗವತ್ಪ್ರೇಮದ ಪ್ರವಾಹ ರೂಪವಾಗಿ ಅವರ ದಿವ್ಯಸೂಕ್ತಿಗಳು ಹೊರಹೊಮ್ಮಿವೆ. ಶ್ರೀಕೃಷ್ಣನ ಸೌಂದರ್ಯ, ಸೌಲಭ್ಯ, ಸೌಶೀಲ್ಯಗಳನ್ನು ಅನುಭವಿಸಿ, ಸ್ಮರಿಸಿ

(33 ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೩ ನೆಯ ಅಧ್ಯಾಯ

ಅರ್ಜುನ ಉವಾಚ –

ಜ್ಯಾಯಸೀ ಚೇತ್ ಕರ್ಮಣಸ್ತೇ
ಮತಾ ಬುದ್ಧಿರ್ಜನಾರ್ದನ ।
ತತ್ಕಿಂ ಕರ್ಮಣಿ ಘೋರೇ ಮಾಂ
ನಿಯೋಜಯಸಿ ಕೇಶವ ॥ 1

ಅರ್ಜುನ: ಕೃಷ್ಣ, ನಿನಗೆ ಕರ್ಮಕ್ಕಿಂತಲೂ ಜ್ಞಾನವು ಹೆಚ್ಚೆಂದು ಅಭಿಪ್ರಾಯವಾದರೆ ನನ್ನನ್ನು ಭಯಂಕರವಾದ ಕರ್ಮದಲ್ಲೇಕೆ ತೊಡಗಿಸುತ್ತಿ ?

ವ್ಯಾಮಿಶ್ರೇಣೇವ ವಾಕ್ಯೇನ
ಬುದ್ಧಿಂ ಮೋಹಯಸೀವ ಮೇ ।
ತದೇಕಂ ವದ ನಿಶ್ಚಿತ್ಯ ಯೇನ
ಶ್ರೇಯೋಽಹಮಾಪ್ನುಯಾಮ್ ॥ 2

ಬೆರಕೆಯಾಗಿ ತೋರುವ ಮಾತುಗಳಿಂದ ನನ್ನ ಅಂತಃಕರಣವನ್ನು ಮೋಹಗೊಳಿಸುವಂತೆ ಆಡುತ್ತಿರುವೆ. ಯಾವುದರಿಂದ ನನಗೆ ಒಳ್ಳೆಯದಾಗುವುದೋ ಆ ಒಂದನ್ನು ನಿಶ್ಚಿತವಾಗಿ ಹೇಳು.

ಶ್ರೀ ಭಗವಾನುವಾಚ–

ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ
ಪುರಾ ಪ್ರೋಕ್ತಾ ಮಯಾಽನಘ ।
ಜ್ಞಾನಯೋಗೇನ ಸಾಂಖ್ಯಾನಾಂ
ಕರ್ಮಯೋಗೇನ ಯೋಗಿನಾಮ್ ॥ 3

ಶ್ರೀಕೃಷ್ಣ : ಅರ್ಜುನ, ಈ ಲೋಕದಲ್ಲಿ ನಾನು ಹಿಂದೆ ಎರಡು ಸ್ಥಿತಿಗಳನ್ನು ಹೇಳಿದೆನು–ಜ್ಞಾನಿಗಳಿಗೆ ಜ್ಞಾನಯೋಗ ; ಸಾಧಕರಿಗೆ ಕರ್ಮಯೋಗ.

ನ ಕರ್ಮಣಾಮನಾರಂಭಾತ್
ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸನ್ನ್ಯಸನಾದೇವ
ಸಿದ್ಧಿಂ ಸಮಧಿಗಚ್ಛತಿ ॥ 4

ಕೆಲಸ ಮಾಡದೆ ಇರುವುದರಿಂದ ಕರ್ಮ ಸಂಬಂಧವನ್ನು ತೊಡೆದುಹಾಕಲಾಗುವುದಿಲ್ಲ. ಕರ್ಮಗಳನ್ನು ಬಿಟ್ಟಮಾತ್ರದಿಂದಲೇ ಸಿದ್ಧಿಯನ್ನು ಪಡೆಯುವುದೂ ಸಾಧ್ಯವಿಲ್ಲ.

ನ ಹಿ ಕಶ್ಚಿತ್ ಕ್ಷಣಮಪಿ
ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ
ಸರ್ವಃ ಪ್ರಕೃತಿಜೈರ್ಗುಣೈಃ ॥ 5

ಯಾವನೂ ಒಂದು ಕ್ಷಣ ಎಂದಿಗೂ ಕೆಲಸವನ್ನು ಮಾಡದೆ ಇರಲಾರನು. ಎಲ್ಲರೂ ತಮ್ಮ ಹುಟ್ಟು ಗುಣಗಳಿಂದ ತಮಗರಿವಿಲ್ಲದಂತೆ ಕರ್ಮಮಾಡುತ್ತಿರುವರು.

ಕರ್ಮೇಂದ್ರಿಯಾಣಿ ಸಂಯಮ್ಯ
ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ
ಮಿಥ್ಯಾಚಾರಃ ಸ ಉಚ್ಯತೇ ॥ 6

ಯಾವನು ಕರ್ಮೇಂದ್ರಿಯಗಳನ್ನು ಬಿಗಿಹಿಡಿದು ಇಂದ್ರಿಯಗಳು ಬಯಸುವ ವಿಷಯಗಳನ್ನು ಮನಸ್ಸಿನಲ್ಲಿ ಹಂಬಲಿಸುತ್ತಿರುವನೋ ಆ ಮೂಢನು ಸುಳ್ಳು ನಟನೆಯ ಡಂಭಾಚಾರಿಯೆನಿಸುವನು.

ಯಸ್ತ್ವಿಂದ್ರಿಯಾಣಿ ಮನಸಾ
ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಂ
ಅಸಕ್ತಃ ಸ ವಿಶಿಷ್ಯತೇ ॥



ಅರ್ಜುನ, ಯಾವನು ಇಂದ್ರಿಯಗಳನ್ನು ಮನಸ್ಸಿನಿಂದ ಬಿಗಿಹಿಡಿದು ಆಸಕ್ತಿಯಿಲ್ಲದೆ ಕರ್ಮೇಂದ್ರಿಯಗಳಿಂದ ಕೆಲಸದಲ್ಲಿ ತೊಡಗುವನೋ ಅವನು ಹೆಚ್ಚಿನವನು.

ನಿಯತಂ ಕುರು ಕರ್ಮ ತ್ವಂ
ಕರ್ಮ ಜ್ಯಾಯೋ ಹ್ಯಕರ್ಮಣಃ ।
ಶರೀರಯಾತ್ರಾಪಿ ಚ ತೇ
ನ ಪ್ರಸಿದ್ಧ್ಯೇದಕರ್ಮಣಃ ॥ 8

ನೀನು ಮಾಡತಕ್ಕದ್ದೆಂದು ಗೊತ್ತಾಗಿರುವ ಕೆಲಸವನ್ನು ಮಾಡು. ಏನೂ ಮಾಡದೇ ಇರುವುದಕ್ಕಿಂತ ಮಾಡುವುದು ಮೇಲು. ನೀನು ಯಾವ ಕರ್ಮವನ್ನೂ ಮಾಡದೇ ಇದ್ದರೆ **ಬದುಕಿರುವುದೇ** ಆಗಲಾರದು.

ಯಜ್ಞಾರ್ಥಾತ್ ಕರ್ಮಣೋಽನ್ಯತ್ರ
ಲೋಕೋಽಯಂ ಕರ್ಮಬಂಧನಃ ।
ತದರ್ಥಂ ಕರ್ಮ ಕೌಂತೇಯ
ಮುಕ್ತಸಂಗಃ ಸಮಾಚರ ॥ 9

ಈಶ್ವರನಿಗೆ ಪ್ರೀತಿಯಾಗಲೆಂದಲ್ಲದೆ ಸ್ವಾರ್ಥಕ್ಕಾಗಿ ಮಾಡುವ ಕರ್ಮಗಳಿಂದ ಈ ಲೋಕವು ಕರ್ಮದ ಕಟ್ಟಿಗೊಳಪಡುವುದು. ಅರ್ಜುನ, ಫಲವನ್ನು ಬಯಸದೆ ಈಶ್ವರನಿಗೆ ಪ್ರೀತಿಯಾಗಲೆಂದು ಕರ್ಮವನ್ನು ನಡೆಸು.

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ
ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಂ
ಏಷ ವೋಽಸ್ತ್ವಿಷ್ಟಕಾಮಧುಕ್ ॥ 10

ಯಜ್ಞಗಳೊಡನೆ ಜನರನ್ನು ಹುಟ್ಟಿಸಿ, ಹಿಂದೆ ಬ್ರಹ್ಮನು ಹೇಳಿದ್ದೇನೆಂದರೆ–ಇದರಿಂದ ಏಳಿಗೆಯನ್ನು ಹೊಂದಿರಿ. ಇದು ನಿಮಗೆ ಬಯಸಿದ್ದನ್ನೆಲ್ಲ ಕೊಡುವಂಥಾದ್ದಾಗಲಿ,

ದೇವಾನ್ ಭಾವಯತಾನೇನ
ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ
ಶ್ರೇಯಃ ಪರಮವಾಪ್ಸ್ಯಥ ॥ 11

'ಇದರಿಂದ ದೇವತೆಗಳನ್ನು ಸಂತೋಷಗೊಳಿಸಿರಿ. ಆ ದೇವತೆಗಳು ನಿಮ್ಮನ್ನು ಸಂತೋಷಗೊಳಿಸಲಿ. ಒಬ್ಬರು ಒಬ್ಬರನ್ನು ಸಂತೋಷಗೊಳಿಸುವವರಾಗಿ ಹೆಚ್ಚಿನ ಶ್ರೇಯಸ್ಸನ್ನು ಪಡೆಯಿರಿ.'

ಇಷ್ಟಾನ್ ಭೋಗಾನ್ ಹಿ ವೋ ದೇವಾ
ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ
ಯೋ ಭುಂಕ್ತೇ ಸ್ತೇನ ಏವ ಸಃ ॥ 12

# ಕರ್ಮವು ಜ್ಞಾನಕ್ಕೆ ಸಾಧನ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | " | 40-00 |
| 3. | ಪುಳಿಯೋಗರೆ | " | 50-00 |
| 4. | ಪೊಂಗಲು | " | 55-00 |
| 5. | ಸಕ್ಕರಪೊಂಗಲ್ | " | 65-00 |
| 6. | ಶಾಕರ ಭಾತ್ | " | 85-00 |
| 7. | ಕೇಸರೀ ಭಾತ್ | " | 90-00 |
| 8. | ಸೀರ | " | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

'ಯಜ್ಞಗಳಿಂದ ಸಂತೋಷಗೊಂಡ ದೇವತೆಗಳು ನಿಮಗೆ ಬಯಸಿದ್ದನ್ನೆಲ್ಲಾ ಕೊಡುತ್ತಾರೆ ಅವರು ಕೊಟ್ಟದ್ದನ್ನು ಅವರಿಗೆ ಕೊಡದೆ ಯಾವನು ಉಣ್ಣುತ್ತಾನೋ ಅವನು ಕಳ್ಳನೇ ಸರಿ.'

ಯಜ್ಞಶಿಷ್ಟಾಶಿನಃ ಸಂತೋ
ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ
ಯೇ ಪಚಂತ್ಯಾತ್ಮಕಾರಣಾತ್ ॥ 13

ಯಜ್ಞಗಳನ್ನು ಮಾಡಿ ಉಳಿದದ್ದನ್ನು ಉಣ್ಣುವವರು ಎಲ್ಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ. ಯಾರು ತಮ್ಮ ಹೊಟ್ಟೆಗಾಗಿ ಬೇಯಿಸುವರೋ ಆ ಪಾಪಿಗಳು ಪಾಪವನ್ನು ಉಣ್ಣುತ್ತಾರೆ.

ಅನ್ನಾದ್ಭವಂತಿ ಭೂತಾನಿ
ಪರ್ಜನ್ಯಾದನ್ನ ಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ
ಯಜ್ಞಃ ಕರ್ಮಸಮುದ್ಭವಃ ॥ 14

ಅನ್ನದಿಂದ ಜೀವಿಗಳು ಹುಟ್ಟುತ್ತವೆ. ಮಳೆಯಿಂದ ಅನ್ನ (ಧಾನ್ಯ) ಹುಟ್ಟುತ್ತವೆ. ಯಜ್ಞದಿಂದ ಮಳೆಯುಂಟಾಗುತ್ತದೆ. ಯಜ್ಞವು ಕರ್ಮದಿಂದ ನಡೆಯುವುದು.

ಕರ್ಮ ಬ್ರಹ್ಮೋದ್ಭವಂ ವಿದ್ಧಿ
ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾತ್ಸರ್ವಗತಂ ಬ್ರಹ್ಮ
ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ 15

ಎಲ್ಲ ಕರ್ಮಗಳ ಮೂಲ ಭಗವಂತ. ವೇದಾಕ್ಷರಗಳಿಂದ ಭಗವಂತನ ಅಭಿವ್ಯಕ್ತಿ, ವೇದಾಕ್ಷರಗಳನ್ನು ಜೀವಿಗಳು ಉಚ್ಚರಿಸುತ್ತವೆ. ಆದ್ದರಿಂದ ಎಲ್ಲೆಡೆಯೂ ತುಂಬಿರುವ ಭಗವಂತನು ವಿಶೇಷತಃ ಯಜ್ಞದಲ್ಲಿ ಸದಾ ಸನ್ನಿಹಿತವಾಗಿದ್ದಾನೆ.

ಏವಂ ಪ್ರವರ್ತಿತಂ ಚಕ್ರಂ
ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ
ಮೋಘಂ ಪಾರ್ಥ ಸ ಜೀವತಿ ॥ 16

ಅರ್ಜುನ, ಹೀಗೆ ಪ್ರವರ್ತಿತವಾದ ಈ ಜೀವನಚಕ್ರವನ್ನು ಯಾವನು ಮುಂದುವರಿಸುವುದಿಲ್ಲವೋ ಅವನು ಪಾಪದ ಬಾಳಿನವನೂ ಇಂದ್ರಿಯಗಳೊಡನೆ ವಿನೋದಪಡುವವನೂ ಆಗುವುದರಿಂದ ಅವನ ಬದುಕು ವ್ಯರ್ಥ.

ಯಸ್ತ್ವಾತ್ಮರತಿರೇವ ಸ್ಯಾತ್
ಆತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಃ
ತಸ್ಯ ಕಾರ್ಯಂ ನ ವಿದ್ಯತೇ ॥ 17

ಯಾವ ಮನುಷ್ಯನು ಪರಮಾತ್ಮನಲ್ಲಿಯೇ ಪ್ರೇಮವುಳ್ಳವನಾಗಿ ಪರಮಾತ್ಮನಿಂದ ತೃಪ್ತನಾಗಿ ಆತನಲ್ಲಿಯೇ ಸಂತೋಷಗೊಳ್ಳುತ್ತಿರುವನೋ ಅವನು ಮಾಡಬೇಕಾದದ್ದೇನೂ ಇಲ್ಲ.

ನೈವ ತಸ್ಯ ಕೃತೇನಾರ್ಥೋ
ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು
ಕಶ್ಚಿದರ್ಥವ್ಯಪಾಶ್ರಯಃ ॥ 18

ಅವನಿಗೆ ಮಾಡಿದ್ದರಿಂದಲೂ ಪ್ರಯೋಜನವಿಲ್ಲ; ಬಿಟ್ಟದ್ದರಿಂದ ಈ ಲೋಕದಲ್ಲಿ ಯಾವ ಹಾನಿಯೂ ಇಲ್ಲ. ಅವನಿಗೆ ಪ್ರಪಂಚದ ಯಾವ ಜೀವಿಯಿಂದಲೂ ಯಾವ ಪ್ರಯೋಜನದ ಅಪೇಕ್ಷೆಯೂ ಇಲ್ಲ.

ತಸ್ಮಾದಸಕ್ತಃ ಸತತಂ
ಕಾರ್ಯಂ ಕರ್ಮ ಸಮಾಚರ ।
ಅಸಕ್ತೋ ಹ್ಯಾಚರನ್ ಕರ್ಮ
ಪರಮಾಪ್ನೋತಿ ಪೂರುಷಃ ॥ 19

ಆದ್ದರಿಂದ ಯಾವಾಗಲೂ ನಿನ್ನ ಕೆಲಸವನ್ನು ಫಲದಾಸೆಯಿಲ್ಲದೆ ಮಾಡು, ಫಲದಾಸೆ ಇಲ್ಲದೆ ಕರ್ಮವನ್ನು ಮಾಡಿದವನು ಪರಮಾತ್ಮನನ್ನು ಪಡೆಯುತ್ತಾನೆ.

ಕರ್ಮಣೈವ ಹಿ ಸಂಸಿದ್ಧಿಂ
ಆಸ್ಥಿತಾ ಜನಕಾದಯಃ ।
ಲೋಕಸಂಗ್ರಹಮೇವಾಪಿ
ಸಂಪಶ್ಯನ್ ಕರ್ತುಮರ್ಹಸಿ ॥ 20

ಜನಕನೇ ಮೊದಲಾದವರು ಕರ್ಮದಿಂದಲೇ ಜ್ಞಾನಸಿದ್ಧಿಯನ್ನು ಹೊಂದಿದರು. ಜನರಿಗೆ ದಾರಿಯನ್ನು ತೋರಿಸಬೇಕೆಂಬುದನ್ನಾದರೂ ಮನಸ್ಸಿಗೆ ತಂದು ನೀನು ಕರ್ಮವನ್ನು ಮಾಡತಕ್ಕದ್ದು.

ಯದ್ಯದಾಚರತಿ ಶ್ರೇಷ್ಠಃ
ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ
ಲೋಕಸ್ತದನುವರ್ತತೇ ॥ 21

ದೊಡ್ಡವನೆನಿಸಿಕೊಂಡವನು ಏನೇನು ಮಾಡುತ್ತಾನೋ ಉಳಿದವರೂ ಅದನ್ನೇ ಮಾಡುತ್ತಾರೆ. ಅವನು ಯಾವುದನ್ನು ಸರಿ ಎಂದು ತಿಳಿದು ಮಾಡುತ್ತಾನೋ ಜನರು ಅದನ್ನು ಹಿಂಬಾಲಿಸುತ್ತಾರೆ.

ನ ಮೇ ಪಾರ್ಥಾಸ್ತಿ ಕರ್ತವ್ಯಂ
ತ್ರಿಷು ಲೋಕೇಷು ಕಿಂಚನ ।
ನಾನವಾಪ್ತ ಮವಾಪ್ತವ್ಯಂ
ವರ್ತ ಏವ ಚ ಕರ್ಮಣಿ ॥ 22

(35ನೇ ಪುಟ ನೋಡಿ)

# ನಮ್ಮಾಳ್ವಾರರ ವೈಶಿಷ್ಟ್ಯ

ನಮ್ಮಾಳ್ವಾರ್ರವರು ಆಳ್ವಾರುಗಳಲ್ಲಿ ಅಯ್ದನೆಯವರು. ಇವರು ಈಗಿನ ತಿನ್ನವಲ್ಲಿ ಜಿಲ್ಲೆಗೆ ಸೇರಿದ ತಾಮ್ರಪರ್ಣಿನದಿಯ ದಡದಲ್ಲಿರುವ ಕುರುಹೂರ್ ಅಥವಾ ಕುರುಕಾಪುರಿ ಎಂಬ ಗ್ರಾಮದಲ್ಲಿ ವೆಳ್ಳಾಳರೆಂಬ ಶೂದ್ರಜಾತಿಗೆ ಸೇರಿದ ಕಾರಿಯಾರ್ ಮತ್ತು ಉಡೈಯ ನಂಗೈಯಾರ್ ಎಂಬ ದಂಪತಿಗಳಿಗೆ ಜನಿಸಿದ ಏಕಮಾತ್ರ ಪುತ್ರರು. ಇವರು ಜನನಪ್ರಭೃತಿ ಅಮಾನುಷ ರೀತಿಯಲ್ಲಿ ಒಂದು ಹುಣಿಸೆಯ ಮರದಕೆಳಗೆ ಆಹಾರಾದಿಗಳಿಲ್ಲದೆ ಬೆಳೆಯುತ್ತಿರಲು ಮಧುರಕವಿಯಾಳ್ವಾರ್ ಎಂಬ ಭಕ್ತವರ್ಯರು ಇವರ ಮಹಿಮೆಯನ್ನು ತಿಳಿದು ಕುರುಕಾಪುರಿಗೆ ಬಂದು ಇವರ ಅನುಗ್ರಹವನ್ನು ಪಡೆದು ಸೇವೆಗೆಯ್ದು, ಇವರ ಮಹಿಮೆಯನ್ನು ಲೋಕಕ್ಕೆ ಹರಡಿದರೆಂದು ಸಂಪ್ರದಾಯಾನುಸಾರವಾಗಿ ಬಂದ ಕಥೆ. ಆದರೆ ಇವರ ಗ್ರಂಥಗಳನ್ನು ಪರಿಶೀಲಿಸಿದರೆ ಇವರ ಪ್ರಪಂಚವು ಹುಣಿಸೆಯಮರದ ಕೆಳಗಿನ ಪೊಟ್ಟರೆಮಾತ್ರವಾಗಿರಲಿಲ್ಲವೆಂದೂ ಇವರಿಗೆ ಸುತ್ತಲಿರುವ ನಾಡಿನ ವಿಶೇಷಪರಿಚಯವಿತ್ತೆಂದೂ ಧಾರಾಳವಾಗಿ ಹೇಳಬಹುದು.

ಇವರ ಜೀವನ ಚರಿತ್ರೆಯನ್ನು 'ಗುರು ಪರಂಪರಾ ಪ್ರಭಾವಂ' ಮತ್ತು 'ದಿವ್ಯಸೂರಿಚರಿತೆ' ಇವುಗಳ ಆಧಾರದ ಮೇರೆಗೆ ನಿಷ್ಕರ್ಷಿಸಬೇಕಾಗಿದೆ. ಪಿಳ್ಳೈಲೋಕಾಚಾರ್ಯರ 'ಶ್ರೀವಚನಭೂಷಣ' ವೇದಾಂತದೇಶಿಕರ 'ದೇಶಿಕ ಪ್ರಬಂಧಂ' ಅಳಹಿಯ ಮಣವಾಳಜೀಯರ 'ಆಚಾರ್ಯ ಹೃದಯಂ', ಮನವಾಳ ಮಹಾಮುನಿಗಳ 'ಉಪದೇಶರತ್ತಿನಮಾಲೈ' ಬ್ರಹ್ಮತಂತ್ರಸ್ವತಂತ್ರ ಜೀಯರ 'ಗುರುಪರಂಪರಾಪ್ರಭಾವಂ', ಅನಂತಾಚಾರ್ಯರ 'ಪ್ರಪನ್ನಾಮೃತಂ', ಕಂದಾಡೆ ಅಪ್ಪನ್ ಅವರ 'ಪೆರಿಯ ತಿರುಮುಡಿ ಅಡೈವು' ಮತ್ತು ಶ್ರೀರಂಗದ 'ಕೋಯಿಲೊಲುಹು' ಇವುಗಳಲ್ಲಿಯೂ ನಮ್ಮಾಳ್ವಾರ್ರವರ ಜೀವನಚರಿತ್ರೆ ಸಂಕ್ಷೇಪವಾಗಿ ಉಕ್ತವಾಗಿವೆ. ಇವುಗಳ ವಿವರಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿದ್ದರೂ ಒಟ್ಟಿನಲ್ಲಿ ಒಂದೇ ಮಾದರಿಯವು.

ನಮ್ಮಾಳ್ವಾರ್ರವರ ಕಾಲವನ್ನು ಖಚಿತವಾಗಿ ನಿಷ್ಕರ್ಷಿಸುವುದಕ್ಕೆ ಸಾಕಷ್ಟು ಆಧಾರಗಳಿಲ್ಲದಿರುವುದರಿಂದ ಆ ವಿಷಯದಲ್ಲಿ ಈಗಿರುವ ಭಿನ್ನಾಭಿಪ್ರಾಯಗಳನ್ನು ಮಾತ್ರ ಸೂಚಿಸಬಹುದಾಗಿದೆ. ಸಂಪ್ರದಾಯ ಗ್ರಂಥವಾದ 'ಗುರುಪರಂಪರಾ ಪ್ರಭಾವ'ವು ಇವರು ಕಲಿಯುಗದ ಆದಿಯ ಪ್ರಮಾಥಿ ಸಂವತ್ಸರದ ವೈಶಾಖಶುಕ್ಲ ಪೂರ್ಣಿಮಾ ಶುಕ್ರವಾರ ವಿಶಾಖಾ ನಕ್ಷತ್ರದಲ್ಲಿ ಅವತರಿಸಿದರೆಂದು ಸೂಚಿಸುವುದು. ಆಧುನಿಕ ವಿದ್ವಾಂಸರುಗಳಲ್ಲಿ ಡಾ॥ ಹುಲ್ಷ್‌ರವರು ಆಳ್ವಾರ್ರವರು ಕ್ರಿ.ಶ. ಹತ್ತನೆಯ ಶತಮಾನಕ್ಕೆ ಎಷ್ಟೋ ಶತಮಾನಗಳ ಹಿಂದೆ ಇದ್ದರೆಂದು ಹೇಳುತ್ತಾರೆ. ಬೌದ್ಧ ಮತ್ತು ಬ್ರಾಹ್ಮಣರ ಘರ್ಷಣಕಾಲವಾದ ಕ್ರಿ.ಶ. ನಾಲ್ಕನೆಯ ಮತ್ತು ಏಳನೆಯ ಶತಮಾನದ ಮಧ್ಯಕಾಲದಲ್ಲಿ ಆಳ್ವಾರುಗಳಿದ್ದರೆಂಬುದು ಡಾ॥ ಎಸ್. ಕೃಷ್ಣಸ್ವಾಮಿಅಯ್ಯಂಗಾರ್ಯರ ಅಭಿಪ್ರಾಯ. ಇತರ ಬೇರೆಬೇರೆ ವಿದ್ವಾಂಸರು ಆಳ್ವಾರ್ರುಗಳ ಕಾಲವನ್ನು ಕ್ರಿ. ಪೂ. ೧–೨ ನೆಯ ಶತಮಾನಗಳಿಂದ ಕ್ರಿ.ಶ. ೯ನೆಯ ಶತಮಾನದ ಮಧ್ಯಕಾಲದವರೆಗೆ ತಮಗೆ ತೋರಿದಂತೆ ನಿಷ್ಕರ್ಷಿಸಲು ಪ್ರಯತ್ನಪಟ್ಟಿದ್ದಾರೆ. ಆದರೆ ಒಟ್ಟಿನಲ್ಲಿ ಇವಾವುವೂ ತೃಪ್ತಿಕರವಾಗಿಲ್ಲವೆಂದೂ, ಈ ಕಾಲ ನಿರ್ಣಯದ ವ್ಯತ್ಯಾಸದಿಂದ ಇವರ ಮತ್ತು ಇವರ ಕೃತಿಗಳ ವಿಷಯದಲ್ಲಿ ಯಾವ ಹಿರಿಮೆ ಕಿರಿಮೆಗಳೂ ಉಂಟಾಗಲಾರದೆಂದೂ ಧಾರಾಳವಾಗಿ ಹೇಳಬಹುದು. ನಮ್ಮಾಳ್ವಾರರಿಗೆ ಶಠಾರಿ, ಮಾರನ್, ಶಠಗೋಪನ್ ಮುಂತಾದ ಹೆಸರುಗಳೂ ಉಂಟು. ಮಧ್ಯಯುಗದ ಶ್ರೀವೈಷ್ಣವ ಆಚಾರ್ಯರಲ್ಲಿ ಸುಪ್ರಸಿದ್ಧ ಆಚಾರ್ಯರಾದ ವೇದಾಂತದೇಶಿಕರು ತಮ್ಮ ಪಾದುಕಾಸಹಸ್ರದಲ್ಲಿ ನಮ್ಮಾಳ್ವಾರರ ಮಹಿಮೆಯನ್ನು ನಾನಾರೀತಿಯಾಗಿ ಕೊಂಡಾಡಿದ್ದಾರೆ.

ನಮ್ಮಾಳ್ವಾರ್ರವರೂ ಇತರ ವೈಷ್ಣವ ಭಕ್ತರಂತೆಯೇ ಅನುಭಾವಿಗಳು (ಈಶ್ವರ ಸಾಕ್ಷಾತ್ಕಾರವನ್ನು ಪಡೆಯುವವರಿಗೆ ಅನುಭಾವಿಗಳೆಂದು ಹೆಸರು) ಈಶ್ವರ ಸಾಕ್ಷಾತ್ಕಾರಕ್ಕೆ ಭಕ್ತಿಯೇ ಮೂಲ. ಈ ಭಕ್ತಿಯು ಕಾರ್ಯಕಾರಣಗಳಿಂದ ಸಿದ್ಧವಾಗುವ ತತ್ತ್ವನಿರೂಪಣಕ್ರಮಕ್ಕೆ ಅನುಗುಣವಾದುದಲ್ಲ. ಆರಾಧ್ಯವಸ್ತುವನ್ನು ಕುರಿತು ಭಕ್ತನಿಗೆ ಸ್ವಂತವಾಗಿ ಉಂಟಾದ ಸ್ವಂತ ಅನುಭಾವದ ಫಲಮಾತ್ರ. ಇತರ ಎಲ್ಲ ಅನುಭಾವಿಗಳಂತೆ ಇವರ ಏಕಮಾತ್ರ ಧ್ಯೇಯವೂ ಈಶ್ವರ ಸಾಕ್ಷಾತ್ಕಾರವೇ. ವೈಷ್ಣವಭಕ್ತರೆಲ್ಲರಿಗೂ ಸಮಾನವಾಗಿರುವಂತೆ ಇವರ ಭಕ್ತಿಯಲ್ಲಿಯೂ ಭಕ್ತಿ, ಪ್ರಪತ್ತಿ, ಕೈಂಕರ್ಯಗಳೆಂಬ ಮೂರು ಭಾಗವನ್ನು ಕಾಣಬಹುದು. ಭಗವಂತನನ್ನು ಪೂರ್ಣವಾಗಿ ಪ್ರೀತಿಸುವುದೇ ಭಕ್ತಿ, ಸರ್ವತ್ಯಾಗಮಾಡಿ ಅವನನ್ನು ಆಶ್ರಯಿಸುವುದೇ ಪ್ರಪತ್ತಿ, ಅವನಿಂದ ಸರ್ವದಾಪ್ರೇರಿತನಾಗಿ ಆತನ ಸೇವೆಯಲ್ಲಿರುವುದು ಕೈಂಕರ್ಯ; ಇವು ಮೂರೂ ಆಳ್ವಾರ್ರವರ ಕೃತಿಗಳಲ್ಲಿ ಪ್ರಧಾನವಾಗಿವೆ.



**ಡಾ॥ ಎನ್. ಅನಂತರಂಗಾಚಾರ್**

ಆಳ್ವಾರ್‌ರವರ ಪ್ರಬಂಧಗಳು ಉದ್ದೇಶಪೂರ್ವಕವಾಗಿ ಒಂದು ಸಿದ್ಧವಾದ ಕ್ರಮವನ್ನನುಸರಿಸಿ ರಚಿಸಿದ ಗ್ರಂಥಗಳಲ್ಲ. ಭಕ್ತಿಯ ಆವೇಶದಲ್ಲಿ ತಮ್ಮ ಹೃದಯವನ್ನು ತೆರೆದು ಯಾವ ನಿರ್ಬಂಧಕ್ಕೂ ಒಳಪಡದೆ ಭಗವಂತನನ್ನು ಕುರಿತು ಹಾಡಿದ ಹಾಡುಗಳವು. ಇವು ಬರಿಯ ಸಂಪ್ರದಾಯ ಸರಣಿಯಿಂದ ಕೂಡಿದ ಮತಪ್ರಧಾನವಾದ ಸ್ತೋತ್ರಮಾಲಿಕೆಗಳಂತಿರದೆ, ಸಾಹಿತ್ಯ ದೃಷ್ಟಿಯಿಂದ ಭಾವಾವೇಶಭರಿತವಾದ ಉತ್ತಮ ಭಾವಗೀತೆಗಳಾಗಿವೆ. ಉದ್ದೇಶಪೂರ್ವಕವಾಗಿ ಯಾವ ತತ್ತ್ವಪ್ರಸಾರಣೆಯನ್ನು ಮಾಡಲು ಪ್ರಯತ್ನಿಸದಿದ್ದರೂ ಮುಂದೆ ಸಿದ್ಧಾಂತ ಸ್ಥಾಪಕರಾದ ರಾಮಾನುಜಾಚಾರ್ಯರು ಪ್ರಚುರಪಡಿಸಿದ ಮೂಲ ತತ್ತ್ವಗಳೆಲ್ಲ ಇವುಗಳಲ್ಲಿ ಅಡಕವಾಗಿವೆ. ಅಲ್ಲದೆ ಪಂಡಿತಪಾಮರೆಲ್ಲರಿಗೂ ಸುಲಭವಾಗಿ ಅರ್ಥವಾಗುವ ಶೆಂದಮಿಳು ಭಾಷೆಯಲ್ಲಿ ಈ ಕೃತಿಗಳು ರಚಿತವಾಗಿರುವುದು ಇವುಗಳ ಮತ್ತೊಂದು ವೈಶಿಷ್ಟ್ಯ.

ಭಕ್ತಿಪಾರವಶ್ಯದಿಂದ ನಮ್ಮಾಳ್ವಾರ್‌ರವರು 'ತಿರುವಿರುತ್ತಮ್' 'ತಿರುವಾಶರಿಯಮ್', 'ತಿರುವಂದಾದಿ' ಮತ್ತು 'ತಿರುವಾಯ್‌ಮೊಳಿ' ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಮೊದಲನೆಯದಾದ 'ತಿರುವಿರುತ್ತ'ದಲ್ಲಿ ಸಂಸಾರದ ದುಸ್ಸಹತೆಯನ್ನೂ, ಎರಡನೆಯದಾದ 'ತಿರುವಾಶರಿಯ'ದಲ್ಲಿ ಭಗವಂತನ ದಿವ್ಯಸ್ವರೂಪಾನುಭವವನ್ನೂ, ಮೂರನೆಯದಾದ 'ತಿರುವಂದಾದಿ'ಯಲ್ಲಿ ಭಗವಂತನಲ್ಲಿ ತಮಗುಂಟಾದ ಅನುರಾಗಾತಿಶಯಗಳನ್ನೂ, ನಾಲ್ಕನೆಯದಾದ 'ತಿರುವಾಯ್‌-ಮೊಳಿ'ಯಲ್ಲಿ ತಮ್ಮ ಇಷ್ಟಾರ್ಥದಂತೆ ಭಗವಂತನು ನಿತ್ಯ ಲೀಲಾವಿಭೂತಿಗಳಿಂದ ಸರ್ವದಾ ವಾಸಮಾಡುವ ವೈಕುಂಠವನ್ನು ಸೇರಿ ತಾವು ಅವನ ದಿವ್ಯ ಕೈಂಕರ್ಯದಲ್ಲಿ ಭಾಗಿಗಳಾದುದನ್ನು ಇಂಪಾಗಿ ವರ್ಣಿಸಿದ್ದಾರೆ. ಕೊನೆಯದಾದ 'ತಿರುವಾಯ್‌ಮೊಳಿ'ಯ ಆಧಾರದಮೇಲೆ ಅವರ ಭಕ್ತಿಯ ಸ್ವರೂಪವನ್ನು ವಿಶದಪಡಿಸಲು ಈ ಪ್ರಬಂಧದಲ್ಲಿ ಪ್ರಯತ್ನಿಸಿದೆ.

ಆದಿಯ ಶ್ರೇಷ್ಠವಾಚಕವಾದ ತಿರು ಅಥವಾ ಶ್ರೀ ಎಂಬ ಭಾವವನ್ನು ಬಿಟ್ಟರೆ ಅವರ ಗ್ರಂಥಗಳು ವೃತ್ತ, ಆಶರಿಯ, ಅಂತಾದಿ ಮತ್ತು ವಾಯ್‌ಮೊಳಿ ಎಂದಾಗುವುದು. ವೃತ್ತ ಮತ್ತು ಆಶರಿಯಗಳು ಪ್ರತ್ಯೇಕ ಛಂದೋಭೇದಗಳು. ಅವುಗಳೇ ವಿಶೇಷವಾಗಿರುವ ಆ ಕೃತಿಗಳಿಗೆ ಅವೇ ನಾಮಕರಣವಾಗಿದೆ. ಅಂತಾದಿಯು ಒಂದು ಪಾಶುರದ ಕೊನೆಯಭಾಗದಿಂದ ಮುಂದಿನ ಪಾಶುರದ ಆದಿಯು ಪ್ರಾರಂಭವಾಗುವ ರಚನಾರೀತಿಯುಳ್ಳವು. 'ತಿರುವಿರುತ್ತ'ದಲ್ಲಿ ನಾಲ್ಕು ಪಾದಗಳಿಂದ ಕೂಡಿದ ನೂರು ಪದ್ಯಗಳಿವೆ.

---

'ಕಟ್ಟಳೈಕಲಿತ್ತುರೈ' ಎಂಬ ಛಂದಸ್ಸಿನಲ್ಲಿ ರಚಿತವಾಗಿದೆ. ಆಳ್ವಾರ್ರು ಭಗವಂತನಲ್ಲಿ ಸಂಪೂರ್ಣವಾಗಿ ಅನುರಕ್ತರಾದ ಸನ್ನಿವೇಶವನ್ನು ನಿರೂಪಿಸುತ್ತದೆ.

'ತಿರುವಾಶಿರಿಯವು ೭೧ ಪಾಶುರಗಳನ್ನುಳ್ಳದ್ದು. ೭ ಭಾಗಗಳಾಗಿವೆ. ಮೊದಲನೆಯದರಲ್ಲಿ ೧೫ ಪಾದಗಳೂ ೨,೩,೫,೭ ರಲ್ಲಿ ೯ ಪಾದಗಳೂ ೪-೬ ರಲ್ಲಿ ಹತ್ತು ಪಾದಗಳೂ ಇವೆ. ಇವುಗಳಲ್ಲಿ ಫಣಿಶಾಯಿಯಾದ ಭಗವಂತನ ಸೌಂದರ್ಯ ವೈಭವ, ಭಗವಂತನಲ್ಲಿ ಮೊರೆಯಿಡುವಿಕೆ, ಸಮುದ್ರಮಥನದ ಸನ್ನಿವೇಶ, ಆದಿಪುರುಷನಲ್ಲಿ ಪೂಜಾಸಕ್ತಿ, ತ್ರಿವಿಕ್ರಮಾವತಾರ, ಭಗವಂತನಲ್ಲಿ ವಿಮುಖರಾಗಿರುವ ಮಾನವರ ಗರ್ಹಣ. ಪ್ರಳಯ – ಈ ಏಳು ವಿಷಯಗಳು ಕ್ರಮವಾಗಿ ಏಳು ಭಾಗಗಳಲ್ಲಿ ವರ್ಣಿತವಾಗಿವೆ.

ಅಂತಾದಿಯಲ್ಲಿ ವೆಣ್ಬಾಛಂದಸ್ಸಿನ ೮೭ ಪಾಶುರಗಳಿವೆ. ಇವುಗಳನ್ನು ಸಂಬಂಧಿಸುವ ಯಾವ ಸೂತ್ರವೂ ಇಲ್ಲಿ ಕಾಣುವುದಿಲ್ಲ. ಒಂದೊಂದೂ ಭಗವತ್ಪ್ರಾರ್ಥನಾರೂಪವಾದ ಭಕ್ತಿಗೀತೆಯಾಗಿದೆ. ಅನೇಕವು ಆಳ್ವಾರ್ರವರು ತಮ್ಮ ಹೃದಯವನ್ನೇ ಕುರಿತು ಮಾಡಿದ ಸಂಬೋಧನೆಗಳಾಗಿವೆ.

'ತಿರುವಾಯ್‌ಮೊಳಿ' ಎಂದರೆ ಶ್ರೀ ಸೂಕ್ತಿ ಅಥವಾ ನಲ್ನುಡಿ ಎಂದರ್ಥ. ಇದರಲ್ಲಿ ೧೧೦೨ ಪದ್ಯಗಳಿವೆ. ಇದು ಹತ್ತು ಶತಕಗಳಾಗಿಯೂ ನೂರು ದಶಕಗಳಾಗಿಯೂ ಭಾಗವಾಗಿದೆ. ಪ್ರತಿ ದಶಕದ ಕೊನೆಯಲ್ಲಿಯೂ ಫಲಶ್ರುತಿಯಿದೆ. ಇವುಗಳ ಸಾರವತ್ತಾದ ಭಾಗವನ್ನು ಶ್ರೀ ವೇದಾಂತ ದೇಶಿಕರು 'ದ್ರಮಿಡೋಪನಿಷತ್ತಾತ್ಪರ್ಯ ರತ್ನಾವಳಿ' ಮತ್ತು 'ದ್ರಮಿಡೋಪನಿಷತ್ಸಾರ' ಎಂಬ ಸಂಸ್ಕೃತ ಕೃತಿಗಳಲ್ಲಿ ಬಹು ಹೃದಯಂಗಮವಾಗಿ ಸಂಗ್ರಹಿಸಿದ್ದಾರೆ. ಅಳಹಿಯಮಣವಾಳ ಜೀಯರು ಅಪ್ಪಣೆ ಕೊಡಿಸಿರುವ 'ದ್ರಮಿಡೋಪನಿಷತ್ಸಂಗತಿ'ಯೂ ಇಂತಹದೇ ಅಲ್ಲದೆ 'ತಿರುವಾಯ್‌ಮೊಳಿಗೆ', 'ಆರಾಯಿರಪ್ಪಡಿ', 'ಒನ್ಪೀರಾಯಿರಪ್ಪಡಿ', 'ಒಣ್ಬದನಾಯಿರಪ್ಪಡಿ', 'ಪದನೆಟ್ಟಾಯಿರಪ್ಪಡಿ', 'ಇರುವತ್ತುನಾಲಾಯಿರಪ್ಪಡಿ', ಈಡು ಮುಪ್ಪತ್ತುನಾಲಾಯಿರಪ್ಪಡಿ', 'ತಿರುವಾಯ್ ಮೊಳಿ ನೂತ್ತಂದಾದಿ' – ಮೊದಲಾದ ಅನೇಕ ವ್ಯಾಖ್ಯಾನಗಳೂ ಉರೈಗಳೆಂಬ ಪ್ರತಿಪದಾರ್ಥ ವಿವರಣಗಳೂ ಇವೆ. ತಿರುವಾಯ್‌ಮೊಳಿಗೆ 'ಭಗವದ್ವಿಷಯ'ವೆಂದು ಸಾಮಾನ್ಯಸಂಜ್ಞೆ. ಇದು ಭಗವದನುಭವ ಪರೀವಾಹ ರೂಪವಾದುದೂ ಸಾಮವೇದ ಸಾರಸಂಗ್ರಹವಾದುದೂ, ದ್ರಾವಿಡ ವೇದಸಾರಸ್ವರೂಪವುಳ್ಳದೂ ಆಗಿದೆ, ಎಂಬುದು ಎಲ್ಲ ಶ್ರೀವೈಷ್ಣವರ ದೃಢವಾದ ನಂಬಿಕೆ.

ಈ ತಿರುವಾಯ್‌ಮೊಳಿಯಲ್ಲಿ ಆಳ್ವಾರ್ರವರು ಭಗವದನುಗ್ರಹದಿಂದ ದಿವ್ಯಜ್ಞಾನ ಪರಿಪೂರ್ಣರಾಗಿ ಭಗವಂತನು ಶ್ರೀ ಕೃಷ್ಣಾವತಾರದಲ್ಲಿ ಗೋಪೀವಲ್ಲಭನಾಗಿ ಭಕ್ತಸಂಶ್ಲೇಷಣ ಮಾಡಿದನೆಂದು ತಿಳಿದು ಅಂತಹ ಸೇರುವಿಕೆಯನ್ನು ತಾವೂ ಪಡೆಯಬೇಕೆಂದು ತಮ್ಮನ್ನು ನಾಯಕಿಯನ್ನಾಗಿ ಭಾವಿಸಿ ಈ ನಾಯಕಿಯು ಭಗವಂತನನ್ನೇ ವರಿಸಬೇಕೆಂದು ಮನಸ್ಸುಮಾಡಿ ಅವನ ಅಗಲಿಕೆಯಿಂದ ದುಃಖಿಸಿ ಪಕ್ಷಿ, ದುಂಬಿ, ಮೋಡ ಮೊದಲಾದುವುಗಳ ಮೂಲಕ ನಾಯಕನಿಗೆ ದೂರುಕಳುಹಿಸಿ ಅವನನ್ನು ಹುಡುಕುತ್ತ ದಿವ್ಯದೇಶಗಳಲ್ಲೆಲ್ಲ ಅಲೆದು ಅವನ ಸೇವೆಯನ್ನು ಪ್ರಾರ್ಥಿಸಿ ವಿಭವಾವತಾರಗಳಲ್ಲಿ ಅವನು ಮಾಡಿರುವ ಚೇಷ್ಟೆಗಳನ್ನೆಲ್ಲ ನೆನೆದು ಅತ್ಯಂತ ಮೋಹಾವಿಷ್ಟೆಯಾಗಿ ಕೊನೆಗೆ ಆ ಮೋಹವನ್ನು ಬಿಟ್ಟು ಭಗವದ್ಗುಣಾನುಭವಾಮೃತವೇ ತನಗೆ ಸರ್ವಸ್ವವೆಂದು ಆತನನ್ನು ಸಂಬೋಧಿಸಿ ತನ್ನ ದುರ್ದಶೆಯನ್ನು ಅವನಿಗೆ ತಿಳಿಯಪಡಿಸಿ ಅವನನ್ನೇ ಶರಣುಹೊಂದಿ ಅವನ ಕೃಪೆಗೆ ಪಾತ್ರಳಾಗಿ ತತ್ಸಾಯುಜ್ಯರೂಪವಾದ ಸಂಶ್ಲೇಷವನ್ನು ಪಡೆದು ನಿತ್ಯಕೈಂಕರ್ಯ ರೂಪವಾದ ಮೋಕ್ಷಸಾಮ್ರಾಜ್ಯವನ್ನು ಅರ್ಚಿರಾದಿ ಮಾರ್ಗದಿಂದ ಶ್ರೀ ವೈಕುಂಠದಲ್ಲಿ ಹೊಂದಿ ನಿತ್ಯ ನಿರತಿಶಯಾನಂದಾನುಭವವನ್ನು ಪಡೆದುದನ್ನು ವರ್ಣಿಸಿದ್ದಾರೆ. ಇದರಲ್ಲಿ ಇವರು ಪಡೆದ ಸಾಕ್ಷಾತ್ಕಾರಮಾರ್ಗದ ಪ್ರತಿ ಮೆಟ್ಟಿಲನ್ನು ನೋಡಬಹುದು. ಇದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಆ ಕಾಲದ ಸನ್ನಿವೇಶಗಳಿಗೆ ಅನುಗುಣವಾಗಿ ನಮ್ಮ ಮನಸ್ಸನ್ನು ತಿದ್ದಿಕೊಳ್ಳಬೇಕು. ಕರ್ಮ, ಫಲ, ಜನ್ಮಾಂತರ, ಭಗವಂತನ ಲೀಲೆ, ಅವತಾರ– ಮೊದಲಾದುವುಗಳಲ್ಲಿ ನಂಬಿಕೆಯನ್ನುಂಟುಮಾಡಿಕೊಳ್ಳಬೇಕು.

ಆಳ್ವಾರ್ರವರಿಗೆ ಭಗವಂತನು ಅನಂತಗುಣ ಪರಿಪೂರ್ಣನಾದ ದಿವ್ಯಮಂಗಳಸ್ವರೂಪಿ. ಆತನ ಸೌಂದರ್ಯಾನುಭವದಲ್ಲಿಯೇ ಇವರಿಗೆ ಸರ್ವದಾ ದೃಷ್ಟಿ. ಲೋಕದಲ್ಲಿರುವ ಸಕಲ ಆನಂದಗಳಿಗೂ ಪ್ರೇಮಕ್ಕೂ ಅವನೇ ಆಕರ, ಅವನೇ ಧ್ಯೇಯ, ಪ್ರಪಂಚವೆಲ್ಲ ಅವನ ಶರೀರ. ಅಲ್ಲಿ ಕಾಣುವುದು ಆತನ ಸೌಂದರ್ಯ. ಆ ದಿವ್ಯಮಂಗಳಸ್ವರೂಪಿಯನ್ನು ಸಾಕ್ಷಾತ್ಕರಿಸುವುದೇ ಮಾನವನ ಪರಮ ಧ್ಯೇಯ. ಜೀವಾತ್ಮನು ನಾಯಕಿಯಂತೆ ನಾಯಕನಾದ ಪರಮಾತ್ಮನನ್ನು ತೃಪ್ತಿಪಡಿಸಿ ಅವನಲ್ಲಿ ತನ್ನನ್ನು ಅರ್ಪಿಸಿ ಸರ್ವ ಪ್ರಯತ್ನಗಳ ಮೂಲಕ ಸಾಕ್ಷಾತ್ಕರಿಸಿ ಅವನ ಕೈಂಕರ್ಯದಲ್ಲಿ ನಿರತನಾಗಬೇಕು. ಜೀವಾತ್ಮನೂ ಪರಮಾತ್ಮನ ಅಂಶವೇ ಆಗಿರುವುದರಿಂದ ಅದನ್ನು ಅವನು ಮಾಡಬಲ್ಲನು. ಪರಮಾತ್ಮನೂ ಜೀವಾತ್ಮನು ತನ್ನನ್ನು ಭಕ್ತಿಯಿಂದ ಕರೆದರೆ ತನ್ನ ಕೃಪಾಕಟಾಕ್ಷದಿಂದ ಬರ



ಮಾಡಿಕೊಳ್ಳುತ್ತಾನೆ. ಜೀವಾತ್ಮನು ತನ್ನ ಪ್ರತ್ಯೇಕ ಸ್ಥಿತಿಯನ್ನುಳಿದು ಅವನನ್ನು ಸಾಕ್ಷಾತ್ಕರಿಸ ಬೇಕು. ಇದೇ ಆಳ್ವಾರ್ರವರ ಸಿದ್ಧಾಂತ. ಇಲ್ಲಿ ನೋಡಬೇಕಾದುದು ತತ್ತ್ವನಿರೂಪಣವನ್ನಲ್ಲ. ಅವರ ಅನುಭವ ಸರಣಿಯನ್ನುಮಾತ್ರ. ತಿರುವಾಯ್ ಮೊಳಿಯ ಅನೇಕ ಕಡೆಗಳಲ್ಲಿ ಆಳ್ವಾರ್ರವರು ತಮ್ಮ ಐಹಿಕವಾದ ಭೌತ ಶರೀರವನ್ನು ಮರೆತು ಭಗವಂತನಲ್ಲಿಯೇ ಪೂರ್ಣವಾಗಿ ಲೀನವಾಗಿರುವುದನ್ನು ನೋಡಬಹುದು. ಪ್ರಕೃತಿಯ ಸಮಸ್ತ ಸೌಂದರ್ಯವೂ ಅವನಿಂದುಂಟಾದುದ

( 29ನೇ ಪುಟ ನೋಡಿ )

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ವರಲಕ್ಷ್ಮೀ ವ್ರತ

ಭಾರತದೇಶ ಪುಣ್ಯಭೂಮಿ. ಯುಗಯುಗಗಳಿಂದ ನಮ್ಮ ದೇಶದಲ್ಲಿ ಯಜ್ಞ ಯಾಗಗಳು, ವ್ರತಗಳು, ಪೂಜೆ, ಉತ್ಸವ ಮೊದಲಾದವು ನಡೆಯುತ್ತಲಿವೆ. ಪ್ರಾಚೀನಕಾಲದ ರಾಜರು ಕೂಡ ಯಜ್ಞ ಯಾಗಗಳನ್ನು ತಾವು ಮಾಡುವುದೇ ಅಲ್ಲದೆ ಇತರರು ಮಾಡುವ ಯಾಗಗಳಲ್ಲಿ ಅಂತರಾಯವುಂಟಾಗದಂತೆ ನೋಡಿಕೊಳ್ಳುತ್ತಿದ್ದರು. ಭಾರತದ ಸ್ತ್ರೀಯರು ಅನೇಕ ವಿಧವಾದ ವ್ರತಗಳನ್ನು ಮಾಡುತ್ತ ಭಗವಂತನನ್ನು ಆರಾಧಿಸಿ ಭಕ್ತಿಮಾರ್ಗವನ್ನು ಬಿಡದೆ, ಪಾತಿವ್ರತ್ಯ ಮಹಿಮೆಯಿಂದ ಸ್ತ್ರೀ ವರ್ಗದ ಗೌರವ ಪ್ರತಿಷ್ಠೆಗಳನ್ನು ಕಾಪಿಟ್ಟು ಭಾವೀಸಂತತಿಯವರಿಗೆ ಆದರ್ಶಪ್ರಾಯರಾದರು. ಹಾಗಾಗಿಯೇ ಇಷ್ಟು ಶತಮಾನಗಳ ನಂತರವೂ ಉತ್ತಮ ಸಂಪ್ರದಾಯವನ್ನೂ, ಆಚಾರಗಳನ್ನೂ ರೂಪಗೆಡಿಸದೆ ಆಚರಿಸುತ್ತಿದ್ದೇವೆ. ಎಲ್ಲರೂ ಯಜ್ಞಯಾಗಾದಿಗಳನ್ನು ಮಾಡಲಾಗದುದರಿಂದ ವ್ರತ, ನೋಂಪಿಗಳನ್ನು ಮಾಡುವುದರಿಂದಲೇ ಭಗವಂತನನ್ನು ಆರಾಧಿಸಿ ಬಹಳವಾದ ಸತ್ಫಲಗಳನ್ನು ಪಡೆದಂತೆ ನಮ್ಮ ಪುರಾಣಗಳಲ್ಲಿ ಎಷ್ಟೋ ನಿದರ್ಶನಗಳಿವೆ. ನಮ್ಮ ದೇಶದಲ್ಲಿ ವ್ರತಗಳಿಗೆ ಇರುವಷ್ಟು ಪ್ರಾಮುಖ್ಯ ಬೇರಾವ ದೇಶದಲ್ಲೂ ಇಲ್ಲ. ಹಲವು ವ್ರತಗಳು ಸ್ತ್ರೀಯರಿಗೆಂದೇ ಉಂಟಾದುವು. ಸ್ತ್ರೀಯರು ಪಾತಿವ್ರತ್ಯ, ಮುತ್ತೈದೆತನ, ಪುತ್ರಶೋಕವಿಲ್ಲದಿರುವಿಕೆಗಳಿಗಾಗಿ ಈ ವ್ರತಗಳನ್ನು ಆಚರಿಸುತ್ತಿರುತ್ತಾರೆ.

ಸ್ತ್ರೀಯರು ನಡೆಸುವ ವ್ರತಗಳಲ್ಲಿ ವರಲಕ್ಷ್ಮೀ ವ್ರತ, ಅಶ್ವತ್ಥ ತುಲಸೀ ವ್ರತ, ಮಂಗಳಗೌರೀ ವ್ರತಗಳು ಬಹುಮುಖ್ಯವಾದವು. ವ್ರತಗಳನ್ನು ಮಾಡುವುದರಿಂದ ದೊರೆಯುವ ಫಲವನ್ನು ಆದಿತ್ಯ ಪುರಾಣ ಹೀಗೆ ಹೇಳುತ್ತದೆ.

ವ್ರತೋಪವಾಸಾನ್ ಖಲು ಯೋ ವಿಧತ್ತೇ
ದಾರಿದ್ರ ಪಾಶಂ ಸ ಭಿನತ್ತಿ ಚಾಶು
ವ್ರತೋಪವಾಸಸ್ಯ ರತಸ್ಯ ಪುಂಸಃ
ನೈವಾಪದಶ್ಯಾಂತಿ ಮುಶಂತಿ ತಜ್ಞಾಃ॥

ಎಂದಲ್ಲಿ ವ್ರತಗಳನ್ನು ಉಪವಾಸಗಳನ್ನು ಆಚರಿಸುವವರು ತಮ್ಮ ದಾರಿದ್ರ್ಯವನ್ನು ಕಳೆದುಕೊಳ್ಳುವರು ಎಂದರ್ಥ. ಅವರಿಗೆ ಯಾವ ಆಪತ್ತುಗಳು ಬರುವುದಿಲ್ಲ.

ದೇವಲನು ತನ್ನ ಸ್ಮೃತಿಯಲ್ಲಿ ಹೀಗೆ ಹೇಳಿದ್ದಾನೆ.

ವ್ರತೋಪವಾಸ ನಿಯಮೈಃ
ಶರೀರೋತ್ತಾಪನೈಸ್ತಥಾ
ವರ್ಣಾಸ್ಸರ್ವೇ ವಿಮುಚ್ಯಂತೇ
ಪಾತಕೇಭ್ಯೋ ನ ಸಂಶಯಃ॥

(ವ್ರತೋಪವಾಸಗಳಿಂದ ಮಾನವರು ತಮ್ಮ ಪಾಪಗಳಿಂದ ಮುಕ್ತರಾಗುವರು.)

ಶ್ರಾವಣ ಮಾಸದಲ್ಲಿ ಮಾಡಲಾಗುವ ವ್ರತಗಳಿಗೆ ಒಂದು ಪ್ರತ್ಯೇಕತೆ ಇದೆ. ಸ್ತ್ರೀ ಜೀವನದಲ್ಲಿ ಶ್ರಾವಣಮಾಸ ಆಭರಣಗಳ ತಿಂಗಳು,– ಕಡಲೆಕಾಯಿ ತಿಂಗಳು, ಮಧುಮಾಸವೆಂದೇ ಹೇಳಬೇಕು. ಶ್ರಾವಣದಲ್ಲಿ ದಕ್ಷಿಣಭಾರತದಲ್ಲಿ ಮುತ್ತೈ-



ದೆಯರು ತಮಗೆ ಐದೆತನವನ್ನು ನೀಡಿ ಅಷ್ಟೈಶ್ವರ್ಯಗಳನ್ನು ಪ್ರಸಾದಿಸುವ ವರಲಕ್ಷ್ಮೀ ವ್ರತವನ್ನು ಮಾಡಲು ಉತ್ಸಾಹಪಡುತ್ತಾರೆ. ಶ್ರಾವಣ ಮಾಸದಲ್ಲಿ ಮನೆಮನೆಯೂ ಹಸಿರು ತೋರಣದಿಂದ ಕೂಡಿ ಅರಿಶಿಣ ಕುಂಕುಮದಿಂದ ಕೂಡಿ ಕಣ್ಣಿಗೆ ಹಬ್ಬದಂತೆ ಕಂಡುಬರುತ್ತದೆ. ಸ್ತ್ರೀಯರೆಲ್ಲ ಬಣ್ಣಬಣ್ಣದ ವಸ್ತ್ರಗಳನ್ನುಟ್ಟು ಹೊರಡುತ್ತಾರೆ. ಮೇಲಾಗಿ ವರಲಕ್ಷ್ಮೀ ವ್ರತವೆಂದರೆ ಕರೆಯದವರ ಮನೆಗೂ ಹೋಗಿ ಬಾಗಿನವನ್ನು ತರುವುದು ಹಿರಿಮೆಯೆಂಬಂತೆ ಭಾವಿಸುತ್ತಾರೆ. ವರಲಕ್ಷ್ಮೀ ವ್ರತವನ್ನು ವರ್ಣಿಸಿದ ಪೌರಾಣಿಕರು ಎಲ್ಲ ವ್ರತಗಳಿಗಿಂತ ಈ ವ್ರತಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದಾರೆ, 'ವ್ರತಾನಾಮುತ್ತಮಂ ವ್ರತಂ' ಎಂದು ಹೊಗಳಿದ್ದಾರೆ. ಈ ವ್ರತವನ್ನು ಆಚರಿಸಿದ ಸ್ತ್ರೀಯರಿಗೆ ದೀರ್ಘ ಆಯಸ್ಸು, ದೀರ್ಘ ಸೌಮಂಗಲ್ಯ, ಧನ ಧಾನ್ಯ ಸಮೃದ್ಧಿ, ಸುಖ ಸಂಪತ್ತು, ಸರ್ವಪಾಪ ವಿಮುಕ್ತಿ, ಉಂಟಾಗುವುದೆಂದು ಹೇಳುತ್ತಾರೆ.

ಬಹು ಹಿಂದೆ ಮಗಧದೇಶದಲ್ಲಿನ ಕುಂಡಿನ ಪಟ್ಟಣದಲ್ಲಿ ಚಾರುಮತಿ ಎಂಬ ಹೆಸರಿನ ಬ್ರಾಹ್ಮಣ ಸ್ತ್ರೀ ಇದ್ದಳು. ಆಕೆ ಪ್ರತಿದಿನ ಬೆಳಗಿನ ಜಾವದಲ್ಲೇ ಎದ್ದು ಸ್ನಾನಮಾಡಿ, ಪತಿಯನ್ನು ಪೂಜಿಸಿ, ನಂತರ ಮನೆಗೆಲಸಗಳನ್ನು ನೋಡಿಕೊಂಡು ಮಿತಭಾಷಿಣಿಯೂ ಪ್ರಿಯಭಾಷಿಣಿಯೂ ಆಗಿ ಒಳ್ಳೆಯ ಹೆಸರು ಪಡೆದಿದ್ದಳು. ಹೀಗಿರಲು ಲಕ್ಷ್ಮೀದೇವಿಗೆ ಆಕೆಯ ಬಗ್ಗೆ ಅನುಗ್ರಹವುಂಟಾಗಿ ಒಂದು ದಿನ ಸ್ವಪ್ನದಲ್ಲಿ ಬಂದು 'ಓ, ಚಾರುಮತಿ! ನಾನು ವರಲಕ್ಷ್ಮಿ, ನಿನ್ನ ಬಗ್ಗೆ ನನಗೆ ಅನುಗ್ರಹ ಉಂಟಾಗಿ ಪ್ರತ್ಯಕ್ಷವಾಗಿದ್ದೇನೆ. ಶ್ರಾವಣ ಶುಕ್ಲ ಪೂರ್ಣಿಮೆಯ ಮೊದಲು ಬರುವ ಶುಕ್ರವಾರದಂದು ನನ್ನನ್ನು ಪೂಜಿಸಿದರೆ ನೀನು ಕೇಳಿದ ವರಗಳನ್ನು ಕೊಡುವೆ' ಎಂದು ನುಡಿದು ಮಾಯವಾದಳು. ಚಾರುಮತಿ ತಕ್ಷಣವೇ ಎದ್ದು ಆ ಕನಸಿನ ವಿಷಯವನ್ನು ಗಂಡ ಹಾಗೂ ಇತರರಿಗೆ ತಿಳಿಸಿದಳು. ಎಲ್ಲರೂ ಒಳ್ಳೆಯ ಕನಸೆಂದರು. ಶ್ರಾವಣಮಾಸ ಬಂದಿತು. ಚಾರುಮತಿ ಮತ್ತಿತರ ಹೆಂಗಸರು ಮುಂಜಾವದಲ್ಲೆದ್ದು ಸ್ನಾನಮಾಡಿ ಮಡಿಯನ್ನುಟ್ಟು, ಆಕೆಯ ಮನೆಯಲ್ಲಿ ಒಂದೆಡೆ ಸೆಗಣಿಯಿಂದ ಸಾರಿಸಿ ರಂಗವಲ್ಲಿಯಿಟ್ಟು ಒಂದು ಮಂಟಪವನ್ನು ಕಟ್ಟಿ ಒಂದು ಮಣೆಯನ್ನಿಟ್ಟು ಅದರ ಮೇಲೆ ಅಕ್ಕಿಯನ್ನು ಹರಡಿ ಪಂಚಪಲ್ಲವದ ಕಳಶವನ್ನಿಟ್ಟು ವರಲಕ್ಷ್ಮೀದೇವಿಯನ್ನು ಆವಾಹನೆ ಮಾಡಿದರು. ಚಾರುಮತಿ ಮತ್ತಿತರ ಸ್ತ್ರೀಯರು ನಂತರ ಭಕ್ತಿ ಪ್ರಪತ್ತಿಗಳಿಂದ 'ಪದ್ಮಾಸನೇ ಪದ್ಮಾಕರೇ ಸರ್ವ ಲೋಕೈಕ ಪೂಜಿತೇ ನಾರಾಯಣ ಪ್ರಿಯದೇವಿ ಸುಪ್ರೀತಾ ಭವ ಸರ್ವದಾ' ಎಂಬ ಧ್ಯಾನಾ ವಾಹನಾದಿ ಷೋಡಶೋಪಚಾರಗಳಿಂದ ಪೂಜೆ ಮಾಡಿ ಒಂಬತ್ತು ಸೂತ್ರಗಳಿರುವ ದಾರವನ್ನು ದಕ್ಷಿಣ ಹಸ್ತ

ಮೂಲ: **ಶ್ರೀಮತಿ ಗಾರ್ಲ ಸರಸ್ವತಿ**


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

ವಲ್ಲಿ ಕಟ್ಟಿಕೊಂಡು ವರಲಕ್ಷ್ಮೀದೇವಿಗೆ ನಾನಾ ವಿಧದ ಭಕ್ಷ್ಯ ಭೋಜ್ಯಗಳನ್ನು ನಿವೇದನೆ ಮಾಡಿ ಪ್ರದಕ್ಷಿಣಾಪೂರ್ವಕ ನಮಸ್ಕಾರ ಮಾಡಲುಪಕ್ರಮಿಸಿದರು. ಒಂದು ಪ್ರದಕ್ಷಿಣೆ ಹಾಕುವ ಹೊತ್ತಿಗೆ ಆ ಸ್ತ್ರೀಯರ ಪಾದಗಳಿಂದ ಘಲ್ ಘಲ್ ಎಂಬ ಸದ್ದು ಕೇಳಿಬಂದಿತು. ಅವರ ಕಾಲುಗಳಲ್ಲಿ ಗೆಜ್ಜೆ ಮೊದಲಾದ ಆಭರಣಗಳು ಕಂಡು ಬಂದವು. ಅವರೆಲ್ಲರೂ ವರಲಕ್ಷ್ಮೀ ಪ್ರಭಾವ ಇದು ಎಂದುಕೊಳ್ಳುತ್ತ ಎರಡನೆ ಪ್ರದಕ್ಷಿಣೆ ಆರಂಭಿಸಿದರು. ಎರಡನೆಯ ಪ್ರದಕ್ಷಿಣೆ ಮುಗಿಯುವುದರಲ್ಲಿ ಅವರೆಲ್ಲರ ಕೈಗಳಲ್ಲಿ ನವರತ್ನ ಖಚಿತವಾದ ಕಂಕಣಗಳು ಮಿಂಚಿನಂತೆ ಹೊಳೆಯುತ್ತ ಕಾಣತೊಡಗಿದವು. ಮೂರನೆಯ ಪ್ರದಕ್ಷಿಣೆ ಮಾಡುತ್ತಿದ್ದಂತೆ ಆ ಹೆಂಗಸರೆಲ್ಲರೂ ಸರ್ವಾಲಂಕಾರ ಭೂಷಿತರಾದರು. ಚಾರುಮತಿ ಮತ್ತು ಇತರ ಸ್ತ್ರೀಯರ ಮನೆಗಳಲ್ಲಿ ಸ್ವರ್ಣಮಯವಾಗಿ ರಥ ಗಜ ತುರಗ ವಾಹನಗಳಿಂದ ತುಂಬಿ ಹೋದವು ನಂತರ ಅವರೆಲ್ಲರೂ ಕೂಡಿ ತಮ್ಮಿಂದ ಕಲ್ಪೋಕ್ತವಾಗಿ ಪೂಜೆ ಮಾಡಿಸಿದ ಬ್ರಾಹ್ಮಣೋತ್ತಮನನ್ನು ಗಂಧ ಪುಷ್ಪಗಳಿಂದ ಸತ್ಕರಿಸಿ, ದಕ್ಷಿಣೆ ತಾಂಬೂಲಗಳನ್ನು ನೀಡಿ ಆತನ ಆಶೀರ್ವಾದ ಪಡೆದರು. ವರಲಕ್ಷ್ಮೀದೇವಿಗೆ ನಿವೇದಿಸಿದ ಭಕ್ಷ್ಯ ಭೋಜ್ಯಗಳನ್ನು ಬಂಧುಗಳೊಡನೆ ಸಂತಸದಿಂದ ಭುಜಿಸಿದರು. ನಂತರ ಸ್ತ್ರೀಯರೆಲ್ಲ ತಮ್ಮ ನಿವಾಸಗಳಿಗೆ ಹಿಂದಿರುಗುತ್ತ 'ಆ ಚಾರುಮತಿ ಎಂತಹ ಅದೃಷ್ಟವಂತೆ! ವರಲಕ್ಷ್ಮೀದೇವಿ ತಂತಾನೆ ಕನಸಿನಲ್ಲಿ ಬಂದು ಮಾತನಾಡಿದಳು ಅವಳೊಂದಿಗೆ; ಅವಳಿಂದ ತಾನೇ ನಮಗೆ ಇಂತಹ ಮಹಾ ಭಾಗ್ಯ ಸಂಪತ್ತುಗಳುಂಟಾದವು' ಎಂದು ಹೊಗಳುತ್ತ ಮಾತನಾಡಿಕೊಂಡರು. ಅಂದಿನಿಂದ ಚಾರುಮತಿಯೂ ಇತರ ಸ್ತ್ರೀಯರೂ ಪ್ರತಿ ವರ್ಷವೂ ವರಲಕ್ಷ್ಮೀವ್ರತವನ್ನು ಮಾಡುತ್ತ ಪುತ್ರ ಪೌತ್ರಾಭಿವೃದ್ಧಿ ಹೊಂದಿ ಧನಕನಕ ವಸ್ತು ವಾಹನಗಳಿಂದ ಸುಖಜೀವನ ನಡೆಸತೊಡಗಿದರು. ಈ ವ್ರತವು ನಾಲ್ಕೂ ವರ್ಣಗಳವರಿಂದ ಆಚರಿಸಲ್ಪಡುತ್ತ ಪ್ರಸಿದ್ಧವಾಯಿತು.

ವರಲಕ್ಷ್ಮೀವ್ರತದ ಹುಟ್ಟು ಬೆಳವಣಿಗೆಯ ಬಗ್ಗೆ ಮತ್ತೊಂದು ಕಥೆ ಪ್ರಚಾರದಲ್ಲಿದೆ. ಅದೊಂದು ಶ್ರಾವಣ ಶುಕ್ಲ ಪೌರ್ಣಮಿಯ ಮೊದಲ ಶುಕ್ರವಾರ. ಒಬ್ಬ ಹಿರಿಯ ಮುತ್ತೈದೆ ಒಂದು ಮನೆಯ ಬಳಿ ಬಂದು ಜಗಲಿಯಮೇಲೆ ಕುಳಿತು ಒಳಕ್ಕೆ ಇಣಿಕಿ ನೋಡಿದಳು ಆ ಮನೆ ಚೆನ್ನಾಗಿ ಸಾರಿಸಲ್ಪಟ್ಟು ಸುಂದರವಾದ ರಂಗೋಲಿಯನ್ನು ಹೊಂದಿದೆ. ಕೆಳಗೆ ಅರಿಶಿಣ ಕುಂಕುಮಗಳಿಂದಲೂ ಮೇಲೆ ಹಸಿರು ಎಲೆಗಳ ತೋರಣದಿಂದಲೂ ಮುಖದ್ವಾರ ಕುಂಬುಕಳೆಯಿಂದ ಕೂಡಿದೆ. ಆ ಮನೆಯ ಚೊಕ್ಕಟತನಕ್ಕೆ ಆ ಹಿರಿಯ ಮುತ್ತೈದೆಗೆ ಸಂತಸವಾಯಿತು. ಆಕೆಯು ಧರಿಸಿದ ರತ್ನದಾಭರಣಗಳು ಆಕೆಯ ದೇಹಕಾಂತಿಯೊಡನೆ ಸ್ಪರ್ಧಿಸುವಂತಿವೆ. ಬಾಗಿಲ ಬಳಿಯ ಜಗಲಿಯಲ್ಲಿ ಆಕೆ ಕುಳಿತುಕೊಳ್ಳುತ್ತಲೇ ಆ ಬೀದಿಗೇ ಬೆಳಕು ಬಂದಂತಾಯಿತು.

ಮನೆಯಲ್ಲಿ ಯಾರೂ ಇದ್ದಂತೆ ತೋರಲಿಲ್ಲವಾಗಿ ಒಳಕ್ಕೆ ನಡೆದಳು. ಆ ಹಿರಿಯ ಮುತ್ತೈದೆಗೆ ಬಾಗಿಲ ಸಂದಿಯಲ್ಲಿ ಅರಿಶಿಣದ ಬಣ್ಣದ ಛಾಯೆಯ ಮುಖವೊಂದು ಕಾಣಿಸಿತು. ಮನೆಯಾಕೆ ಒಬ್ಬ ಬಡ ಹೆಂಗಸು. ಅಂದು ಸಂಪತ್ ಶುಕ್ರವಾರವೆಂದು ಬೆಳಗಾಗುವ ಮೊದಲೇ ಎದ್ದು ಅಭ್ಯಂಜನ ಸ್ನಾನಮಾಡಿ, ಮನೆಯನ್ನು ಸಾರಿಸಿ ರಂಗವಲ್ಲಿಯನ್ನಿಟ್ಟಿದ್ದಳು. ತನ್ನ ಸೀರೆಯ ಒಂದು ತುಂಡನ್ನು ನೀಡಿ ಗಂಡನನ್ನು ವ್ಯಾಪಾರಕ್ಕೆ ಕಳುಹಿಸಿದ್ದಳು. ಮಿಕ್ಕ ತುಂಡು ಸೀರೆ ತನಗೆ ಸಾಕಾಗದು. ಬಾಗಿಲು ಮುಚ್ಚಿಕೊಂಡು ಮನೆಯಲ್ಲಿ ಕುಳಿತಿರೋಣವೆಂದರೆ ಆ ದಿನ ಲಕ್ಷ್ಮಿಯ ಆಗಮನಕ್ಕಾಗಿ ಬಾಗಿಲನ್ನು ತೆರೆದೇ ಇಡಬೇಕು. ಹಾಗಾಗಿ ಬಾಗಿಲ ಹಿಂದೆ ಅಡಗಿದ್ದಳು.

'ಮನೆಯನ್ನು ನೋಡಿ ಮನೆಯಾಕೆಯನ್ನು ತಿಳಿ' ಎಂದರು. ಆ ಮನೆ ಎಷ್ಟು ಶುಚಿಯಾಗಿ, ಚೊಕ್ಕಟವಾಗಿತ್ತೋ ಆ ಮನೆಯಾಕೆಯ ಮುಖವೂ ಅಷ್ಟೇ ಶೋಭಾಯಮಾನವಾಗಿದ್ದಿತು. ಹಿರಿಯ ಮುತ್ತೈದೆ ಆಕೆಯನ್ನು ಕುರಿತು 'ಇಂದು ಸಂಪತ್ ಶುಕ್ರವಾರ, ಮುತ್ತೈದೆಯರೆಲ್ಲ ವರಲಕ್ಷ್ಮಿಯ ಪೂಜೆ ಮಾಡಬೇಕು. ಪೂಜೆ ಮಾಡಿ ನನಗೊಂದಿಷ್ಟು ಅನ್ನ ಹಾಕು' ಎಂದು ಕೇಳಿದಳು.

ಮನೆಯಾಕೆ 'ಅಮ್ಮಾ, ನಾನೂ ನನ್ನ ಗಂಡನೂ ಒಂದೇ ಬಟ್ಟೆ ಹೊಂದಿದವರು. ಆತ ಗ್ರಾಮ ಸಂಚಾರ ಮಾಡಿಕೊಂಡು ಬಂದ ಹೊರತು ನಾನು ಹೊರಬರುವಂತಿಲ್ಲ, ಚೆಂಬು ತುಂಬಿದ ಹೊರತು ಹೊಟ್ಟೆ ತುಂಬದು' ಎಂದು ನೊಂದುಕೊಂಡಳು.

'ಕಷ್ಟಗಳು ಯಾರಿಗಾದರೂ ಇದ್ದದ್ದೆ, ಇರಲಿ ಈ ಸೀರೆ ಉಟ್ಟುಕೋ' ಎನ್ನುತ್ತ ಒಂದು ಸೀರೆಯನ್ನು ನೀಡಿ, 'ಅಂಗಡಿ ಸೆಟ್ಟಿಯಬಳಿ ಹೋಗಿ ವರಲಕ್ಷ್ಮೀದೇವಿ ಕಳುಹಿಸಿದ್ದಾಳೆಂದು ಹೇಳಿ ಅಡಿಗೆಯ ಸಾಮಗ್ರಿಗಳನ್ನು ತೆಗೆದುಕೊಂಡು ಬಾ' ಎಂದು ತಿಳಿಸಿದಳು. ಮನೆಯಾಕೆ ಅಳುಕುತ್ತಲೇ ಅಂಗಡಿಗೆ ಹೋಗಿ ಕೇಳಲು ಸೆಟ್ಟಿ ಬೇಕಾದ ಸಾಮಗ್ರಿಗಳನ್ನೆಲ್ಲಾ ನೀಡಿ ಕಳುಹಿಸಿದ. ಮನೆಗೆ ಬರುವ ವೇಳೆಗೆ ಆಕೆಯ ಗಂಡ ಹೊರಲಾಗದಷ್ಟು ಗಂಟು ಮೂಟೆಗಳೊಂದಿಗೆ ಮನೆಗೆ ಬಂದು ಸೇರಿದ್ದ.

ಎಲ್ಲವೂ ಹಿರಿಯ ಮುತ್ತೈದೆಯ ಪ್ರಭಾವ ಎಂದು ಕೊಳ್ಳುತ್ತ ಆ ದಂಪತಿಗಳು ಪಂಚಭಕ್ಷ್ಯ ಪರಮಾನ್ನಗಳಿಂದ ಅವಳಿಗೆ ಔತಣವೇರ್ಪಡಿಸಿದರು. ರಾತ್ರಿಯೆಲ್ಲ ಆಕೆಯ ಬಳಿಯೇ ಕುಳಿತಿದ್ದರು. ಬೆಳಗಿನ ಜಾವದ ಒಂದು ಹೊತ್ತಿನಲ್ಲಿ ಅವರಿಗೆ ತೂಕಡಿಕೆಯುಂಟಾಗಿ, ಎದ್ದು ನೋಡುವುದರಲ್ಲಿ ಆ ಹಿರಿಯ ಮುತ್ತೈದೆ ಅಂತರ್ಧಾನವಾಗಿದ್ದಳು. ಆಕೆ ಮಲಗಿದ್ದ ಕೋಣೆಯ ನಾಲ್ಕೂ ಮೂಲೆಗಳಲ್ಲೂ ಧನದ ರಾಶಿ ಹೊಳೆಯುತ್ತಿತ್ತು. ಮನೆಯಾಕೆ ಈ ಚಿತ್ರವನ್ನು ನೆರೆಯವರಿಗೆ ತೋರಿಸಿದಳು. ಆ ಹಿರಿಯ ಮುತ್ತೈದೆಯೇ ವರಲಕ್ಷ್ಮಿ ಎಂದು ಅವರೆಲ್ಲ ತೀರ್ಮಾನಿಸಿದರು. ಧನರಾಶಿಯನ್ನು ನಡುಮನೆಯಲ್ಲಿ ರಾಶಿಹಾಕಿ ಪೂಜೆಮಾಡಿದರು. ಒಂಬತ್ತು ಬಗೆಯ ಸಾರವಸ್ತುಗಳಿಂದ ಅಡಿಗೆ ಮಾಡಿ ವರಲಕ್ಷ್ಮಿಗೆ ನೈವೇದ್ಯ ನೀಡಿದರು. ಇದೇ ವರಲಕ್ಷ್ಮೀವ್ರತವಾಗಿ ಪ್ರತಿ ಮನೆಯಲ್ಲೂ ಬೆಳೆಯಿತು. ಐದೆತನಕ್ಕಾಗಿಯೂ ಈ ವ್ರತವನ್ನು ಸ್ತ್ರೀಯರು ಆಚರಿಸುತ್ತಾರೆ.

ಈ ವರಲಕ್ಷ್ಮೀ ವ್ರತವನ್ನು ಕುರಿತು ಭವಿಷ್ಯತ್ಪುರಾಣದಲ್ಲೂ ಒಂದು ಕಥೆಯಿದೆ. ಕೈಲಾಸದಲ್ಲಿ ಒಮ್ಮೆ ಶಿವಪಾರ್ವತಿಯರು ಪಗಡೆಯಾಡಿದರು. ಆಟದಲ್ಲಿ ಮಧ್ಯದಲ್ಲಿ ವಾದವುಂಟಾಯಿತು. ವಾದವನ್ನು ತೀರ್ಮಾನಿಸಲು ಚಿತ್ರನೇಮಿಯನ್ನು ನೇಮಿಸಲಾಯಿತು. ಚಿತ್ರನೇಮಿ ಪರಮೇಶ್ವರನೇ ಗೆದ್ದನೆಂದು ತೀರ್ಮಾನಿಸಿದ. ಪಾರ್ವತಿ ಕೋಪದಿಂದ ಚಿತ್ರನೇಮಿ ಕುಷ್ಠರೋಗಿಯಾಗಲಿ ಎಂದು ಶಪಿಸಿದಳು. ಚಿತ್ರನೇಮಿ ಶಾಪವಿಮುಕ್ತಿಗಾಗಿ ಪಾರ್ವತಿಯನ್ನು ಪ್ರಾರ್ಥಿಸಿದ. ಶ್ರಾವಣ ಶುಕ್ರವಾದದು ವರಲಕ್ಷ್ಮೀವ್ರತವನ್ನು ಮಾಡಿದಲ್ಲಿ ರೋಗನಿವಾರಣೆ ಯಾಗುವುದೆಂದು ಆಕೆ ತಿಳಿಸಿದಳು. ಚಿತ್ರನೇಮಿ ವರಲಕ್ಷ್ಮಿಯನ್ನು ಪೂಜೆ ಮಾಡಿ ಶುಭವನ್ನು ಹೊಂದಿದ. ಪಾರ್ವತಿಯೂ ಕೂಡ ವರಲಕ್ಷ್ಮೀವ್ರತ ಮಾಡಿಯೇ ಕುಮಾರ ಸ್ವಾಮಿಯನ್ನು ಪಡೆದಳು. ಇದು ಪುರಾಣದಲ್ಲಿ ವಿವರಿಸಲಾಗಿರುವ ಮೂಲಕಥೆ.

ಮನೆಯೆಲ್ಲವನ್ನೂ ಅಥವಾ ವ್ರತಾಚರಣೆಯ ಭಾಗವನ್ನು ಸೆಗಣಿಯಿಂದ ಸಾರಿಸಿ ರಂಗೋಲಿಯಿಟ್ಟು, ಒಂದು ಮಂಟಪವನ್ನು ಕಟ್ಟಿ ಒಂದು ಕಮಲವನ್ನು ಸುಂದರವಾಗಿ ಚಿತ್ರಿಸಿ ಅದರಲ್ಲಿ ಕಲಶವನ್ನಿಡುತ್ತಾರೆ. ಕಲಶವನ್ನು ಅಲಂಕರಿಸಿ ವರಲಕ್ಷ್ಮಿಯನ್ನು ಆವಾಹನೆ ಮಾಡುತ್ತಾರೆ. ನಂತರ ಭಕ್ತಿಯಿಂದ ಪೂಜೆ ಮಾಡಿ ಬಲಗೈಗೆ ದಾರವನ್ನು ಕಟ್ಟಿ ಕೊಳ್ಳುತ್ತಾರೆ. ಸಂಜೆ ಭಜನೆ, ಪ್ರದಕ್ಷಿಣೆಗಳನ್ನು ಮಾಡುತ್ತಾರೆ. ಬ್ರಾಹ್ಮಣರಿಗೆ, ಮುತ್ತೈದೆಯರಿಗೆ ಬಾಗಿನ ದಕ್ಷಿಣೆಗಳನ್ನು, ಶಕ್ತಿಯಿದ್ದಷ್ಟು ಅನ್ನದಾನಮಾಡುತ್ತಾರೆ. ಈ ವಿಧವಾಗಿ ವರಲಕ್ಷ್ಮೀ ಪೂಜೆ ಮಾಡಿದಲ್ಲಿ ಸರ್ವ ಸೌಭಾಗ್ಯವೂ ಉಂಟಾಗಿ ಪುತ್ರ ಪೌತ್ರಾದಿಗಳಿಂದ ಸುಖಜೀವನ ಸಿದ್ಧಿಸುವುದೆಂದು ಹೇಳಲಾಗಿದೆ. ಅನೇಕ ಮಂದಿ ಪತಿವ್ರತೆಯರೂ, ಮಹಾರಾಣಿಯರೂ ತಪ್ಪದೆ ಆಚರಿಸಿದ ವರಲಕ್ಷ್ಮೀವ್ರತ ಹೆಂಗಸರ ಸಾಂಸಾರಿಕ ಜೀವನವು ಶುಭಪ್ರದವಾಗಲು ಮಾಡುವ ಅನೇಕ ವ್ರತಗಳಲ್ಲಿ ಅತ್ಯಂತ ಮುಖ್ಯವಾದದ್ದು. ★

# ಶ್ರೀರಾಘವೇಂದ್ರ ಗುರುಸಾರ್ವಭೌಮರು



ತೈಲಚಿತ್ರ : ಮಧುಗಿರಿ ರಾಮು

ಇಸ್ವಿ 1671 ರಲ್ಲಿ ವಿರೋಧಿಕೃತ ವರ್ಷದ ಶ್ರಾವಣ ಬಹುಳ ಬಿದಿಗೆಯಲ್ಲು ಸಶರೀರ ವೃಂದಾವನಗತರಾಗಿ, ಭಕ್ತರ ಕಷ್ಟಗಳನ್ನು ನೀಗಿ ಇಷ್ಟಗಳನ್ನು ಅನುಗ್ರಹಿಸುವ ಮಂತ್ರಾಲಯ ದೊರೆಯೆಂಬ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಪುಣ್ಯದಿನಾಚರಣೆಗಳು ಹಲವೆಡೆ ನಡೆಯುತ್ತಿವೆ. ಶ್ರೀ ಗುರುಗಳ ವೃಂದಾವನಗಳು ಅಲ್ಲಲ್ಲಿ ಸ್ಥಾಪಿತವಾಗುತ್ತಿವೆ ಯೆಂದರೆ ಇವರ ಮಹಿಮೆ ತಿಳಿಯಬಹುದಾಗಿದೆ. ಇದೀಗ ಅವರ ಕೆಲವು ವಿಚಾರವನ್ನು ಓದುಗರಿಗಾಗಿ ಬರೆಯುತ್ತಿದ್ದೇನೆ.

ಆವೊಬ್ಬ ಮಹಾತ್ಮನು ಅವತರಿಸುವುದಕ್ಕೆ ತಕ್ಕ ಪರಂಪರೆಯ ಮೇಲ್ಮೆಯೂ ಗಣನೀಯ. ಶ್ರೀ ಗುರುಗಳು ವಿಜಯನಗರದ ಅರಸ್ಸಲ್ಲಿ ಮಾನ್ಯತೆಯನ್ನು ಪಡೆದ ವಿದ್ವಾಂಸರ ಮನೆತನದಲ್ಲಿಯೇ ಅವತರಿಸಿದರು. ದೇವರ ಹರಕೆಯೂ ಇದಕ್ಕೆ ಮೂಲಕಾರಣವಾಗುತ್ತದೆ. ದೈವಿಕ ಸದ್ಭಾವನೆಯ ಕುಟುಂಬದಲ್ಲಿ, ತಿರುಪತಿಯ ವೆಂಕಟರಮಣನ ಹರಕೆಯಂತೆ ಶ್ರೀ ಗುರುಗಳು ಜನಿಸಿದರು. ಕುಂಭಕೋಣದ ಮಠಾಧೀಶರಲ್ಲಿ ಆಸರೆಯನ್ನು ಹೊಂದಿದ ತಂದೆ ತಾಯಿಗಳಿಂದಾಗಿ ಉಭಯ ಕುಲಶುದ್ಧರಾಗಿಯೇ ಇವರು ಉದ್ಭವಿಸಿದರು. ಪ್ರಹ್ಲಾದನ ಅವತಾರವೆಂದು ಇವರನ್ನು ಗೌರವಿಸುವುದು ಸೂಕ್ತ! ಪ್ರಹ್ಲಾದನ ಗರ್ಭಾವಸ್ಥೆಯಲ್ಲಿ ನಾರದನು ಪರಮಾತ್ಮನ ಭಕ್ತಿ ವಿಚಾರವನ್ನು ಆತನ ತಾಯಿಗೆ ಹೇಳುವುದನ್ನು ಆ ಶಿಶುವು ಕೇಳಿದ್ದು, ಆ ಮೇಲಿನ ಅವತಾರಗಳಲ್ಲೂ ಅದು ಪ್ರತಿರೂಪ ಗೊಳ್ಳುವುದು ಸಹಜವಾಗಿದೆ. ಅಂತೆ, ಭಾವುಕನಾದ ಶ್ರೀನಾವೆಂಕಟನು ಆ ಮಠದ ಗುರುಗಳಲ್ಲಿ ವಿದ್ಯಾಭ್ಯಾಸದಲ್ಲಿ ಉತ್ತೀರ್ಣನಾದನು. ಇವನನ್ನು ತನ್ನ ಶಿಷ್ಯನಾಗಿಸಬೇಕೆಂದು ಗುರುಗಳು ಬಯಸಿದರು. ಆದರೆ, ತನ್ನ ಕೌಟುಂಬಿಕ ಸಂಗತಿಗಳಿಂದಾಗಿ ಈತ ತುಸು ಪರಿತಪಿಸುತ್ತಿದ್ದನು!

ಶಾರದಾದೇವಿಯು ಈತನ ಕನಸಿನಲ್ಲಿ ಕಾಣಿಸಿಕೊಂಡು, ಗುರುಗಳ ಹೇಳಿಕೆಯನ್ನು ಸ್ವೀಕರಿಸಿ, ಗ್ರಂಥ ರಚನೆ ಹಾಗೂ ತತ್ತ್ವ ಪ್ರಸಾರಗಳ ಮೂಲಕ ಜನತೆಗೆ ಜ್ಞಾನ ದೀಪವನ್ನು ಬೆಳಗಿಸುವಂತೆ ಅಪ್ಪಣೆಯಿತ್ತಳು. ನೈಸರ್ಗಿಕವಾಗಿರುವ ಪ್ರಾಣಿ ಪಕ್ಷಿಗಳು ನಮ್ಮ ಭವಿಷ್ಯವನ್ನು ಸೂಚಿಸುವಂತೆ, ನಮ್ಮ ಕನಸಿನಲ್ಲಿಯೂ ಭವಿಷ್ಯರೂಪ, ರೇಖೆ ಚಿತ್ರಿತವಾಗುತ್ತದೆಯೆಂಬುದು ವಿಶ್ವಾಸಾರ್ಹವಾಗಿದೆ! ಅಂತೆ, ಆ ಮಠದ ಗುರುಗಳಿಂದ ಸನ್ಯಾಸಾಶ್ರಮವನ್ನು ಪಡೆದುದರಿಂದಾಗಿ, 'ಶ್ರೀ ರಾಘವೇಂದ್ರ'ರೆಂಬ ಹೆಸರು ಪಡೆದರು.

ಶ್ರೀ ಗುರುಗಳು ತನ್ನ ಭಕ್ತರ ಕಷ್ಟಗಳನ್ನು ಪರಿಹರಿಸಿ ಇಷ್ಟಗಳನ್ನು ನೆರವೇರಿಸಿದರೆಂದು ಅನೇಕ ಉದಾಹರಣಗಳಿವೆ.

ಶ್ರೀ ರಾಘವೇಂದ್ರ ಗುರುಗಳು ಶ್ರೀರಾಮಕೃಷ್ಣ ಚರಿತಾಮೃತ ಮಂಜರಿ ಇತ್ಯಾದಿ ಹಲವಾರು ಕೃತಿಗಳನ್ನು ಸಂಸ್ಕೃತದಲ್ಲಿ ಬರೆದರು. 'ಇಂದು ಎನಗೆ ಗೋವಿಂದ ನಿನ್ನ ಪದಾರವಿಂದ ತೋರೊ ಮುಕುಂದ' ಎಂಬ ಪಲ್ಲವಿಯುಳ್ಳ ಕನ್ನಡ ಪದ್ಯವನ್ನೂ ಬರೆದರು.

ಶ್ರೀ ಮಧ್ವಾಚಾರ್ಯರು ಗೋವೆಗೆ ಸಂಚಾರ ಹೋದಾಗ ಹಾಗೂ ಇತರತ್ರ ಹಲವಾರು ಪವಾಡಗಳನ್ನು (ಪ್ರಭಾವಗಳನ್ನು) ಜನತೆಗೆ ತೋರಿ, ತಾನೊಬ್ಬ 'ಅಮಾನುಷ' ನೆಂಬದನ್ನು ತೋರಿಸಿದ್ದರು; ಬೀಜವನ್ನು ಬಿತ್ತಿ, ಮಂತ್ರದ ಮೂಲಕ ಕೂಡಲೆ ಅದರಿಂದ ಫಲವು ದೊರೆಯುವುದು; ಮೂವತ್ತು ಜನರಿಗೂ ಎತ್ತಲಾರದ ಕೃಷ್ಣ ಪ್ರತಿಮೆಯನ್ನು ತಾನೊಬ್ಬನೇ ಎತ್ತಿದುದು; ಬಲು ಚಿಕ್ಕ ಮನುಷ್ಯನ ಹೆಗಲೇರಿ (ಲಘುತಪಃಸಿದ್ಧಿಯಿಂದ) ಆತ ತನ್ನನ್ನು ಹೊರುವಂತಾದುದು;

ಶ್ರೀ ರಾಘವೇಂದ್ರಸ್ವಾಮಿಗಳು ಅದೊಮ್ಮೆ ಬಾದಷಹನು ಪರೀಕ್ಷೆಗಾಗಿ ತಂದಿರುವ ಮಾಂಸಾದಿಗಳ ರಾಶಿಯನ್ನು 'ತೀರ್ಥಪ್ರೋಕ್ಷಣೆ'ಯಿಂದ ಫಲ ಪುಷ್ಪಗಳನ್ನಾಗಿಸಿದ್ದರು, ಅಕಾಲಮರಣಗ್ರಸ್ತನಾದ ಬಾಲಕನನ್ನು ಪುನರುಜ್ಜೀವಿಸಿದ್ದರು. ನಿರಕ್ಷರಕುಕ್ಷಿಯಾದ ವೆಂಕಣ್ಣನಿಗೆ ಪ್ರಧಾನಿ ಪಟ್ಟವೊದಗಲು (ಪತ್ರವಾಚನ ಶಕ್ತಿಯಿತ್ತು), ಆತನಿಂದ ತನಗೆ 'ಮಂಚಾಲೆ' ಗ್ರಾಮವೊದಗಲು ಅನುವಾದರು!

ಶ್ರೀ ಗುರುಗಳ ಸ್ಮರಣ ಹಾಗೂ ವೃಂದಾವನ ಸೇವೆಗಳಿಂದಾಗಿ ಪುನೀತರಾದ ಭಕ್ತರ ಸಂಖ್ಯೆಗಳು ಅಪಾರವಾಗಿವೆ. ಶ್ರೀ ಗುರುಗಳ ಮೃತ್ತಿಕೆಯು ನಮ್ಮನ್ನು ಪಾವನಗೊಳಿಸುತ್ತದೆ! ಶ್ರೀ ಗುರುಗಳು ದಯಾಮಯರಾಗಿ ಎಲ್ಲರಿಗೂ ಹಿತವನ್ನು ಅನುಗ್ರಹಿಸಲಿ!

—

ಶ್ರೀ ಕೆ. ವೆಂಕಟ್ರಾಯಾಚಾರ್ಯ

# ಮಂತ್ರಾಲಯದ ರಾಯಪ್ಪ

ಲೋಕ ಕಲ್ಯಾಣಕ್ಕೆ ಭಾರತಾವನಿಯಲ್ಲಿ ಅವತರಿಸಿ ತತ್ತ್ವ ಸಾರವಾದ ಮಾಧ್ವಸಿದ್ಧಾಂತವನ್ನು ಪೋಷಿಸಿ ವೈಷ್ಣವ ಸಂಪ್ರದಾಯವನ್ನು ದೇದೀಪ್ಯಮಾನಗೊಳಿಸಿದ ಶ್ರೀರಾಘವೇಂದ್ರರು ಪ್ರಾತಃ ಸ್ಮರಣೀಯರು. ಮೂರು ಶತಮಾನಗಳ ಹಿಂದೆ ಅವತಾರ ಮಾಡಿ ಭಕ್ತರನ್ನುದ್ಧರಿಸಿದ ಶ್ರೀ ರಾಘವೇಂದ್ರರ ಸನ್ನಿಧಾನ ಇಂದಿಗೂ ಪವಿತ್ರತೆಯಿಂದ ಪುಣ್ಯಕ್ಷೇತ್ರವಾಗಿ ಶೋಭಾಯಮಾನವಾಗಿದೆ. ಸನ್ಮಾರ್ಗ ವಿಮುಖರಾಗಿ ಮಾನವರು ವಂಚಿತರಾಗುತ್ತಿರುವುದನ್ನು ಕಂಡು ತಮ್ಮ ಬ್ರಹ್ಮಾಂಡದಂತಹ ಪುಣ್ಯರಾಶಿಯನ್ನು ಧಾರೆಯೆರೆದು ಯತಿತ್ರಯರಲ್ಲಿ ಪ್ರಖ್ಯಾತರಾಗಿದ್ದಾರೆ. ನೃಸಿಂಹ ಪುರಾಣದ ವಚನವೊಂದು ಮಾನವರಾಗಿ ಅವತರಿಸಿದ ಶ್ರೀರಾಘವೇಂದ್ರರು ದೇವತೆಗಳೆಂದು ಪುಷ್ಟೀಕರಿಸುವುದು.

ಶಂಕು ಕರ್ಣಾಖ್ಯ ದೇವಸ್ತು ಬ್ರಹ್ಮಶಾಪಾಚ್ಚ ಭೂತಲೇ ।
ಪ್ರಹ್ಲಾದ ಇತಿ ವಿಖ್ಯಾತೋ ಭೂಭಾರ ರಕ್ಷಣೇ ರತಃ ॥
ಸ ಏವ ರಾಘವೇಂದ್ರಾಖ್ಯಃ ಯತಿರೂಪೇಣ ಸರ್ವದಾ ।
ಕಲೌ ಯುಗೇ ರಾಮಸೇವಾಂ ಕುರ್ವನ್ ಮಂತ್ರಾಲಯೇ ಭವತ್ ॥

—"ಶಂಕುಕರ್ಣನೆಂಬ ಕರ್ಮಜದೇವತೆಯು ಸತ್ಯಲೋಕದಲ್ಲಿ ಬ್ರಹ್ಮದೇವರ ಸೇವೆ ಮಾಡಿಕೊಂಡಿದ್ದು, ಶ್ರೀಹರಿಯ ಸಂಕಲ್ಪದಂತೆ ದೇವತೆಗಳ ಕಾರ್ಯಕ್ಕಾಗಿ ಹಾಗೂ ಲೋಕಕಲ್ಯಾಣಕ್ಕಾಗಿ ಬ್ರಹ್ಮದೇವರ ಶಾಪನಿಮಿತ್ತ ವರದಿಂದ ದೈತ್ಯಬಾಲಕನಾದ ಪ್ರಹ್ಲಾದರಾಜರಾಗಿ ಕಲಿಯುಗದಲ್ಲಿ ರಾಮಚಂದ್ರ ದೇವರ ಸೇವೆ ಮಾಡುತ್ತಾ ಮಂತ್ರಾಲಯ ಕ್ಷೇತ್ರದಲ್ಲಿ ಶ್ರೀರಾಘವೇಂದ್ರರಾಗಿ ವಿರಾಜಿಸುತ್ತಿದ್ದಾರೆ" ಎಂದು ಹೇಳಲಾಗಿದೆ. ಒಂದು ಅಗಾಧ ಶಕ್ತಿಯ ಪ್ರತೀಕವಾಗಿ ಯುಗಯುಗಾಂತರದ ಪುಣ್ಯಾಂತರವೋ ಎಂಬಂತೆ ಈ ಅವತಾರ ನಮ್ಮನ್ನು ಪಾವನಗೊಳಿಸಿದೆ.

ತಂಜಾವೂರು ಜಿಲ್ಲೆಗೆ ಸೇರಿದ ಕುಂಭಕೋಣೆಯಲ್ಲಿ ಮಾಧ್ವಮತಾವಲಂಬಿಗಳಾದ ಕೃಷ್ಣಭಟ್ಟರು (ಶ್ರೀ ರಾಘವೇಂದ್ರರ ಮುತ್ತಜ್ಜಂದಿರು) ವೇದಾಧ್ಯಯನಾದಿಯಲ್ಲಿ ಪಾರಂಗತರಾಗಿದ್ದಂತೆ ವೀಣಾವಾದನದಲ್ಲಿಯೂ ವಿಶೇಷ ಪಾಂಡಿತ್ಯವನ್ನು ಪಡೆದಿದ್ದರು. ಕ್ರಿ.ಶ. 1519 ರಿಂದ 1530 ರ ವರೆಗೂ ಕಲಾಪ್ರೋತ್ಸಾಹಕನಾಗಿದ್ದ ವಿಜಯನಗರದ ಶ್ರೀಕೃಷ್ಣದೇವರಾಯನ ಕಾಲದಲ್ಲಿ ಆಸ್ಥಾನ ವಿದ್ವಾಂಸರಾಗಿದ್ದರು. ಕೃಷ್ಣಭಟ್ಟರ ಮೊಮ್ಮಕ್ಕಳಾದ ತಿಮ್ಮಣ್ಣಭಟ್ಟರು ದೊಡ್ಡ ಪಂಡಿತರಾಗಿದ್ದು ವಂಶ ಗೌರವನ್ನು ರಕ್ಷಿಸಿದವರಾಗಿದ್ದರು. ವಿಜಯನಗರ ಸಾಮ್ರಾಜ್ಯದ ಅಳಿವಿನ ದುಶ್ಚಿಹ್ನೆಗಳು, ಪ್ರಭುತ್ವದಲ್ಲಿ ಅನೀತಿಯ ಪ್ರವೇಶವಾಗಿ ಸಜ್ಜನರಿಗೆ ಕೀರ್ತಿ ಗೌರವಗಳು ಉಳಿಯುವುದು ಕಷ್ಟವಾಯಿತು. ಆಗ ಇತರ ವಿದ್ವಾಂಸರುಗಳಂತೆ ವೀಣಾ ತಿಮ್ಮಣ್ಣ ಭಟ್ಟರು ಜೀವನೋಪಾಯ ಮಾರ್ಗವನ್ನು ಕಂಡುಕೊಳ್ಳಲು ಕಾಂಚೀಪುರದ ಸಮೀಪದಲ್ಲಿರುವ ಭುವನಗಿರಿ ಎಂಬ ಸ್ಥಳವನ್ನು ಸೇರಿದರು.

ರಾಜಾಶ್ರಯವು ಕುಟುಂಬಕ್ಕೆ ತಪ್ಪಿದ್ದರಿಂದ ಆದಾಯ ಕಡಿಮೆಯಾಗಿ ಉದರ ನಿರ್ವಹಣೆ ತಾಪತ್ರಯವಾಯಿತು. ತಿಮ್ಮಣ್ಣನವರ ಪತ್ನಿ ಗೋಪಮ್ಮ ಪತಿಗೆ ಪಡಿನೆರಳೋ ಎಂಬಂತೆ ವಿಧೇಯಳಾಗಿದ್ದಳು. ಪರಸ್ಪರ ಅನುರಾಗಯುಕ್ತರಾಗಿದ್ದ ಇವರ ದಾಂಪತ್ಯದಲ್ಲಿ ಸಂತಾನದ ಕೊರತೆಯಿದ್ದು ಕೊನೆಗೆ ತಿರುಪತಿ ಶ್ರೀ ವೆಂಕಟೇಶ ಸ್ವಾಮಿಯನ್ನು ಮೊರೆಹೊಕ್ಕರು. ಕಾಲಾನುಕ್ರಮದಂತೆ ಶ್ರದ್ಧಾ ಭಕ್ತಿ ಸೇವೆಯಿಂದ ಗೋಪಮ್ಮನಿಗೆ ಕನ್ಯಾಶಿಶುವು, ತದನಂತರ ಗಂಡುಶಿಶುವು ಜನನವಾಯಿತು. ಏಳೆಂಟು ವರ್ಷಗಳನಂತರ ಮಗಳಿಗೆ ವಿವಾಹವಾಗಿ, ಮಗ ವಿದ್ಯಾಭ್ಯಾಸಕ್ಕೆಂದು ಹೊರಟು ಹೋದ ನಂತರ ಮಕ್ಕಳ ಕೊರತೆ ಇನ್ನೊಮ್ಮೆ ಕಾಡಿತು. ಹಿಂದಿನಂತೆ ಈ ಸಾರಿಯು ತಿರುಮಲೆ ವೆಂಕಟೇಶ್ವರ ಸ್ವಾಮಿಯನ್ನೇ ಆರಾಧಿಸಲು ಪ್ರಾರಂಭಿಸಿದರು. ಉಪವಾಸಾದಿಗಳಿಂದಲೂ, ಆಹಾರ ನಿಯಮಗಳಿಂದಲೂ ಅನನ್ಯ ಶರಣರಾಗಿ ಸೇವೆಯನ್ನು ಮಾಡಿದರು. ಕಠಿಣಸೇವೆಯಿಂದ ತೃಪ್ತನಾದ ಸ್ವಾಮಿಯು ಪುತ್ರನು ಜನಿಸುವುದಾಗಿ ಹೇಳಿ ಅದೃಶ್ಯವಾದನು. ಗ್ರಹಗಳು ತಮ್ಮ ಅತ್ಯುಚ್ಚಸ್ಥಾನದಲ್ಲಿದ್ದಾಗ ದಿವ್ಯ ಮುಹೂರ್ತದಲ್ಲಿ ಪುತ್ರರತ್ನವನ್ನು ಗೋಪಮ್ಮ ಪ್ರಸವಿಸಿದಳು. ಶ್ರೀ ವೆಂಕಟೇಶ್ವರ ಸ್ವಾಮಿಯ ಅನುಗ್ರಹದಿಂದ ಜನಿಸಿದ ಮಗುವಿಗೆ ವೆಂಕಟಭಟ್ಟನೆಂಬ ಹೆಸರಿನಿಂದ ಕರೆದರು.

ಶ್ರೀ ಜಿ. ಶ್ರೀಧರ್

ಈ ವೆಂಕಟಭಟ್ಟರೇ ಮುಂದೆ ಶ್ರೀರಾಘವೇಂದ್ರರೆಂದು ಖ್ಯಾತರಾದರು.

ತಿಮ್ಮಣ್ಣಭಟ್ಟರು ತಮ್ಮ ಚಿಕ್ಕ ಮಗನಾದ ವೆಂಕಟಭಟ್ಟರಿಗೆ ವಿದ್ಯಾಭ್ಯಾಸದ ವಿಷಯದಲ್ಲಿ ತಕ್ಕಷ್ಟು ಪರಿಶ್ರಮ ವಹಿಸಿದರು. ಕುಶಾಗ್ರಮತಿಯಾಗಿದ್ದ ಮಗನಾದ್ದರಿಂದ ಬೋಧಿಸಿದ ಪಾಠಗಳನ್ನು ಶೀಘ್ರವಾಗಿಯೆ ಗ್ರಹಿಸಿ, ತಂದೆ ತಾಯಿಗಳನ್ನು ಸಂತೋಷಪಡಿಸುತ್ತಿದ್ದರು. ವೀಣಾ ತಿಮ್ಮಣ್ಣಭಟ್ಟರ ನಂತರ ಸಂಸಾರ ಭಾರವೆಲ್ಲಾ ಹಿರಿಯ ಮಗನಾದ ಗುರುರಾಜಾಚಾರ್ಯನ ಮೇಲೆಯೇ ಬಿದ್ದಿತು. ವೆಂಕಟಭಟ್ಟರ ವಿದ್ಯಾಭ್ಯಾಸ ಬ್ರಹ್ಮೋಪದೇಶವಾದ ನಂತರ ಮಧುರೆಯಲ್ಲಿದ್ದ ಅವರ ಅಕ್ಕನ ಪತಿಯಾದ ಲಕ್ಷ್ಮೀನೃಸಿಂಹಾಚಾರ್ಯರ ಬಳಿ ಮುಂದುವರಿಯಿತು. ವೇದಗಳು, ತರ್ಕ, ವ್ಯಾಕರಣ ಎಲ್ಲಾ ವ್ಯಾಸಂಗಮಾಡಿ ವೀಣಾ ವಿದ್ಯೆಯಲ್ಲಿಯೂ ಪಾರಂಗತರಾದರು.

ಸಂಸ್ಕೃತದಲ್ಲಿ ಪ್ರೌಢರಾಗಿದ್ದ ವೆಂಕಟಭಟ್ಟರು ಮಾಧ್ವಮತ ಅತ್ಯುಚ್ಚ ಗ್ರಂಥಗಳಾದ ಶ್ರೀ ನ್ಯಾಯಸುಧಾ ಗ್ರಂಥದ ಅಧ್ಯಯನ ಮಾಡಲು ಕುಂಭಕೋಣೆಯ ಶ್ರೀ ಸುಧೀಂದ್ರ ತೀರ್ಥ ಶ್ರೀಪಾದಂಗಳವರ ಸನ್ನಿಧಿಗೆ ಹೊರಟರು. ಪಾಠ ಪ್ರವಚನಗಳನ್ನು ಬೋಧಿಸಲು ಶ್ರೀಗಳವರು ಒಪ್ಪಿ ವೆಂಕಟಭಟ್ಟರನ್ನು ತಮ್ಮ ಪಾಠಶಾಲೆಯ ಶಿಷ್ಯರನ್ನಾಗಿ ಸ್ವೀಕರಿಸಿದರು. ವೆಂಕಟಭಟ್ಟರ ಸಹ ವಿದ್ಯಾರ್ಥಿಗಳು ಸ್ಥಳವಂದಿಗರಾಗಿದ್ದು ಧನಮದದಿಂದ ಕುರುಡಾಗಿದ್ದು ಅವರಿಗೆ ತೊಂದರೆ ಮಾಡುತ್ತಿದ್ದರು. ಆದರೆ ವೆಂಕಟಭಟ್ಟರಿಗೆ ತಮ್ಮ ವ್ಯಾಸಂಗವಾಯಿತು ತಾವಾಯಿತು ಎಂಬಂತೆ ದೂರವಿರುತ್ತಿದ್ದರು. ಶ್ರೀಪಾದಂಗಳವರ ವಾಕ್ಯವನ್ನು ಚಿಂತಿಸಿ "ಪರಿಮಳ" ಎಂಬ ಹೆಸರಿನಿಂದ ಗ್ರಂಥವಾಗಿ ಟಿಪ್ಪಣಿಗಳನ್ನು ಬರೆದಿಡುತ್ತಿದ್ದರು. ಒಂದು ದಿನ ಪಾಠಶಾಲದಲ್ಲಿ ಸಂದಿಗ್ಧ ವಿಚಾರವನ್ನು ಪೂರ್ಣಮಾಡದೆ ಶ್ರೀಗಳವರು ಎದ್ದುಬಿಟ್ಟರು. ವೆಂಕಟಭಟ್ಟರು ಆ ದಿನ ರಾತ್ರಿ ತಮ್ಮ

(19 ನೇ ಪುಟ ನೋಡಿ)

# ರಾಘವೇಂದ್ರರ ಬಗ್ಗೆ ಹರಿದಾಸರು

ಶ್ರೀ ರಾಘವೇಂದ್ರರ ಮೇಲೆ ಸಾಮಾನ್ಯವಾಗಿ ಜನಸಾಮಾನ್ಯರಿಂದು ಒಳಕೆ ಇರುವ ಕೇವಲ ಹತ್ತೆಂಟು ದಾಸರ ಕೃತಿಗಳಿಂದಲೇ ತೃಪ್ತಿ ಹೊಂದುತ್ತಲಿದ್ದಾರೆ. ಆದರೆ ಈ ವಿಚಾರದಲ್ಲಿ ಶ್ರಮಿಸಿ ಆಳವಾಗಿ ನೋಡಿದರೆ ಸುಮಾರು 50 ಕ್ಕೂ ಮೀರಿದ ದಾಸರುಗಳಿಂದ 200 ಕ್ಕೂ ಮೀರಿದ ಕನ್ನಡ ಪದ, ಪದ್ಯ, ಸುಳಾದಿ, ಉಗಾಭೋಗಾದಿಗಳು ಮುದ್ರಿತವಾಗದೇ ಹಸ್ತ ಪತ್ರಿಕೆಯಲ್ಲಿ ಸೇರಿದವೂ ಸೇರಿ ಬೆಳಕಿಗೆ ಬಂದಿವೆ. ಅವುಗಳು ಲೇಖಕನಲ್ಲಿವೆ- "ಶ್ರೀಹರಿದಾಸಸಾಹಿತ್ಯದಲ್ಲಿ ಶ್ರೀರಾಘವೇಂದ್ರರು'' ಎಂಬ ಶಿರೋ ನಾಮದಲ್ಲಿ 500 ಪುಟಗಳು ಮೀರಿ ಬರೆಯುವ ಸಾಮಗ್ರಿಗಳಿವೆ ಎಂದರೆ ಯಾರೂ ಶಂಕಿಸಬೇಕಿಲ್ಲ

ದಾಸರ ಕೃತಿಗಳಲ್ಲಿ ಹೇಳಲ್ಪಡುವ ವಿಚಾರಾದಿಗಳನ್ನು ವಿಂಗಡಿಸಿದರೆ 1) ಶ್ರೀರಾಮರ ಮಹಿಮೆ 2) ಅವರ ಪೂರ್ವಜರ ಮಹತ್ವ 3) ಅವರು ಸಂಚರಿಸಿದ ಸ್ಥಳಗಳು, 4) ಅವರು ಮಾಡಿದ ಪವಾಡಾದಿಗಳು, 5) ಶ್ರೀ ಮಂತ್ರಾಲಯ ಕ್ಷೇತ್ರ ಮಹಿಮೆ, 6) ತುಂಗಭದ್ರಾವೈಖರಿ, 7) ಶ್ರೀ ರಾಯರ ಮಂತ್ರಾಕ್ಷರ ಮಹಿಮೆ, 8) ಅವರ ಶಾರೀರ ಮಹಿಮೆ, 9) ಅವರ ಮೃತ್ತಿಕಾಮಹಿಮೆ, 10) ಅವರು ತಿಳಿಸಿದ ತತ್ತ್ವಗಳ ವಿವರ, 11) ಸ್ವಪ್ನಾದಿಗಳಲ್ಲಿ ಅವರ ಅನುಗ್ರಹ, 12) ಶ್ರೀ ರಾಯರ ವೈಭವಾದಿಗಳ ಕಾರಣಾದಿಗಳನ್ನು ಉತ್ತಮ ಪ್ರಾಸಾದಿಕ ಭಾಷಾಲಹರಿಯಲ್ಲಿ ಚಿತ್ರ ವಿಚಿತ್ರವಾಗಿ ವಿವರಿಸಿ ಭಕ್ತರ ಚಿತ್ತಾಕರ್ಷಣ ಮಾಡಿರುತ್ತಾರೆ.

## ಯಾರು ಯಾರು ಎಷ್ಟು ಕೃತಿ ರಚಿಸಿರುತ್ತಾರೆ?

ಭೃಗ್ವಂಶ ಸಂಭೂತರಾದ ಶ್ರೀ ವಿಜಯದಾಸರು 6 ಕೃತಿಗಳನ್ನೂ, ಶ್ರೀ ಪ್ರಸನ್ನ ವೇಂಕಟದಾಸರ 1 ಕೃತಿಯನ್ನೂ, ಶ್ರೀ ಐಜಸ್ವಾಮಿಗಳು 2 ಕೃತಿಗಳನ್ನೂ, ಶ್ರೀ ಗೋಪಾಲದಾಸರು 7 ಕೃತಿಗಳು ಹಾಗೂ 1 ಸುಳಾದಿಯನ್ನೂ, ಶ್ರೀ ಜಗನ್ನಾಥದಾಸರು 15 ಕೃತಿಗಳನ್ನೂ, ಶ್ರೀ ಪ್ರಾಣೇಶದಾಸರು 5 ಕೃತಿಗಳನ್ನೂ, ಶ್ರೀ ಗುರುಗೋಪಾಲ ವಿಠಲ ದಾಸರು 4 ಕೃತಿಗಳನ್ನೂ, ಶ್ರೀ ವರದಗೋಪಾಲ ವಿಠಲದಾಸರು 1 ಕೃತಿಯನ್ನೂ, ಶ್ರೀ ಶ್ರೀದವಿಠಲರು 6 ಕೃತಿಗಳನ್ನೂ, ಶ್ರೀಶವಿಠಲರು 1 ಕೃತಿಯನ್ನೂ, ಗುರು ಶ್ರೀಶವಿಠಲರು 2 ಕೃತಿಗಳನ್ನೂ, ಶ್ರೀ ಜನಾರ್ದನ ವಿಠಲರು 2 ಕೃತಿಗಳನ್ನೂ, ಶ್ರೀ ಅಭಿನವ ಜನಾರ್ದನ ವಿಠಲರು 15 ಕೃತಿಗಳನ್ನೂ, ಶ್ರೀ ರಮಾಪತಿ ವಿಠಲರು, ಶ್ರೀ ಗುರು ತಂದೆ ಗೋಪಾಲವಿಠಲರು, ಶ್ರೀ ಶೇಷಗಿರೀಶರು, ಶ್ರೀ ಗುರು ವಿಜಯ ವಿಠಲರು. ಶ್ರೀ ಲಕ್ಷ್ಮೀಪತಿ ವಿಠಲರು, ಶ್ರೀ ತಂದೆ ಶ್ರೀಪತಿವಿಠಲರು, ಶ್ರೀ ವೇಂಕಟೇಶ, ಶ್ರೀ ಕಮಲೇಶರು, ಶ್ರೀ ಶಕೇಶವರು, ಶ್ರೀ ತಂದೆ ಸುಧೀಂದ್ರರು. ಶ್ರೀ ಗುರು ಇಂದಿರೇಶರು, ಶ್ರೀ ಗರುಡವಾಹನವಿಠಲರು. ಶ್ರೀ ವರದೇಶವಿಠಲರು, ಇಂದಿರೇಶರು. ವಿಜಯ ಮೋಹನ ವಿಠಲರು, ಶ್ರೀ ವೇಂಕಟವಿಠಲರು, ಶ್ರೀರಾಮಚಂದ್ರ ವಿಠಲರಿಂದ ರಚಿತ ತಲಾ ಒಂದೊಂದು ಕೃತಿಗಳು ಲಭಿಸಿವೆ. ಶ್ರೀ ಗುರು ಪ್ರಾಣೇಶದಾಸರು, ಶ್ರೀ ಶ್ರೀಶಪ್ರಾಣೇಶವಿಠಲದಾಸರು, ಶ್ರೀ ಕೇಶವ ವಿಠಲರು, ಶ್ರೀ ಅನಂತಾದ್ರೀಶರು, ಇಂದಿರೇಶಕೃತ ವಿಜಯ ಮೋಹನ ವಿಠಲರು, ತಂದೆ ಪುರಂದರವಿಠಲರು, ಗೋಪತಿವಿಠಲರು, ರಘುನಾಥ ವಿಠಲರುಗಳಿಂದ ರಚಿತವಾದ ಎರಡೆರಡು ಅಪರೂಪ ಕೃತಿಗಳಿವೆ. ಶ್ರೀ ಮಧ್ವೇಶ ವಿಠಲರು 8 ಕೃತಿಗಳನ್ನು ರಚಿಸಿರುವುದು ಲಭಿಸಿವೆ. ಆದರೆ ಶ್ರೀ ಗುರುಜಗನ್ನಾಥ ವಿಠಲರು ಶ್ರೀರಾಯರ ಮೇಲೆ ರಚಿಸಿದ 48 ಕೃತಿಗಳು ಲಭಿಸಿವೆ

ಇದೂ ಇಲ್ಲದೇ ಶ್ರೀ ಉರಗಾದ್ರಿವಾಸವಿಠಲರು, ಶ್ರೀ ತಂದೆ ವೆಂಕಟೇಶವಿಠಲದಾಸರು, ಗುರು ಗೋವಿಂದ ವಿಠಲರು, ಶ್ರೀ ಜಯೇಶವಿಠಲರು, ಶ್ರೀ ಪಾದಪುತ್ರರಾದ ಪಂಡಿತರಾದ ರಾಜಾ ಎಸ್. ಗುರುರಾಜಾಚಾರ್ಯರು, ಎಲ್ಲಕಿಂತ ಮಿಗಿಲಾಗಿ ಶ್ರೀಮದ್ವ್ಯಾಸರಾಜ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಪ್ರಸನ್ನ ತೀರ್ಥ ಶ್ರೀಪಾದಂಗಳವರ ರಚನೆಯ ಅನಂತ ಕೃತಿಗಳು ಲಭಿಸಿವೆ. ★

- ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯ

(17ನೇ ಪುಟದಿಂದ)

ಪರಿಮಳ ಗ್ರಂಥದಲ್ಲಿ ತಮಗೆ ತೋಚಿದ ಸಮಂಜಸ ಪೂರ್ಣ ಅರ್ಥವನ್ನು ಆ ಶ್ಲೋಕಕ್ಕೆ ಬರೆದಿಟ್ಟು ನಿದ್ರಿಸುತ್ತಿದ್ದರು. ನಡುರಾತ್ರಿಯಲ್ಲಿ ಆಕಸ್ಮಿಕವಾಗಿ ಶ್ರೀಗಳವರು ಮಠದ ಮಂಟಪದಲ್ಲಿ ಮಲಗಿದ್ದ ವೆಂಕಟಭಟ್ಟರ ಬಳಿ ಬಂದರು. ಅಲ್ಲಿ ಅವರು ಪರಿಮಳ ಗ್ರಂಥದ ಟಿಪ್ಪಣಿಯನ್ನು ಕಂಡು ವಿಸ್ಮಿತರಾದರು. ಅದಲ್ಲದೆ ಅಪೂರ್ಣವಾಗಿರಿಸಿದ್ದ ಸಂದಿಗ್ಧ ವಿಚಾರವನ್ನು ಸಮಂಜಸವಾಗಿ ವಿವರಿಸಿರುವುದನ್ನು ಕಂಡು ವೆಂಕಟಭಟ್ಟರ ಪ್ರತಿಭೆಗೆ ತಲೆದೂಗಿದರು.

ಚಳಿಯಲ್ಲಿ ನಡುಗುತ್ತಿದ್ದ ತಮ್ಮ ಶಿಷ್ಯನ ಮೇಲೆ ತಮ್ಮ ಶಾಲು ಹೊದೆಸಿ ಆ ಗ್ರಂಥದೊಡನೆ ಶ್ರೀಗಳವರು ಹಿಂತಿರುಗಿದರು. ಬೆಳಗ್ಗೆ ಎದ್ದ ವೆಂಕಟಭಟ್ಟರ ತಮ್ಮ ಮೇಲೆ ಶ್ರೀಪಾದಂಗಳವರ ಶಾಲು ಇರುವುದನ್ನು ಕಂಡು ನಡುಗಿಹೋದರು. ಮಾತ್ಸರ್ಯದಿಂದ ಸಹ ಅಧ್ಯಯನಿಗಳು ಮಾಡಿರುವ ಕುಚೋದ್ಯವಿರಬೇಕೆಂದು ಭಾವಿಸಿದರು. ಶ್ರೀಗಳವರಲ್ಲಿ ದೀರ್ಘದಂಡ ಪ್ರಣಾಮ ಮಾಡಿ ವೆಂಕಟಭಟ್ಟರು ಅರಿಕೆ ಮಾಡಿಕೊಂಡರು. ಶ್ರೀಗಳವರು ಸ್ನಾನಾದಿಗಳಾದ ನಂತರ ಬರಲು ಅಪ್ಪಣೆ ನೀಡಿದರು. ಅದರಂತೆ ಅವರು ಬಂದಾಗ ಇತರ ಶಿಷ್ಯರುಗಳ ಮುಂದೆ "ಪರಿಮಳ" ಗ್ರಂಥವನ್ನು ಹೊರ ತೆಗೆದು ಅದರ ವಿವರವನ್ನು ಮನಗಾಣಿಸಿದರು. ಆಗ ಇತರ ಶಿಷ್ಯರಿಗೂ ವೆಂಕಟಭಟ್ಟರ ಮೇಲೆ ಅಭಿಮಾನ ಆದರ ಮೂಡತೊಡಗಿತು. ಕೊನೆಯಲ್ಲಿ ನ್ಯಾಯಸುಧಾ ಗ್ರಂಥದ ಪಾಠವು ಮುಗಿದ ಮೇಲೆ ಮಂಗಳ ಮಹೋತ್ಸವದಂದು ವೆಂಕಟಭಟ್ಟರು ಬರೆದಿದ್ದ "ಪರಿಮಳ" ಗ್ರಂಥವನ್ನು ನೆರೆದ ವಿದ್ವಜ್ಜನರಿಗೆ ಪರಿಚಯಿಸಿ ಅವರಿಗೆ "ಪರಿಮಳಾಚಾರ್ಯ" ಎಂಬ ಬಿರುದು ನೀಡಿ ಸತ್ಕರಿಸಿದರು.

ವಿದ್ಯಾಭ್ಯಾಸ ಮುಗಿಸಿದ ಬಂದ ವೆಂಕಟಭಟ್ಟರಿಗೆ ಸರಸ್ವತಿ ಎಂಬ ಕನ್ಯೆಯೊಡನೆ ವಿವಾಹವಾವಾಯಿತು. ಕೆಲಕಾಲ ಸಂಸಾರವಾದ ನಂತರ ಪುತ್ರೋತ್ಸವವು ಆಯಿತು. ಪೂರ್ವದಿಂದಲೂ ಬಡತನ ಬೇಗೆಯಿಂದ ಬೇಯುತ್ತಿದ್ದ ಇವರ ಮನೆಗೆ ಅನಿರೀಕ್ಷಿತವಾಗಿ ಕಳ್ಳರು ಇದ್ದು ಬದ್ದುದನ್ನೆಲ್ಲಾ ದೋಚಿದಾಗ ಇನ್ನು ದುಸ್ಥಿತಿಗೆ ಈಡಾದರು. ಭುವನಗಿರಿಯಿಂದ ತಮ್ಮ ಹೆಂಡತಿ ಮಕ್ಕಳೊಂದಿಗೆ ಕುಂಭಕೋಣೆಗೆ ಬಂದು ಸುಧೀಂದ್ರ ತೀರ್ಥರನ್ನು ಆಶ್ರಯಿಸಿದರು. ಮಠದಲ್ಲಿ ಪಾಠ ಪ್ರವಚನಾದಿಗಳನ್ನು ನಡೆಸಿಕೊಂಡು ನಿಶ್ಚಿಂತವಾಗಿ ದಂಪತಿಗಳು ವಾಸವಾಗಿದ್ದು ಬಿಟ್ಟರು. ಮುಂದೆ ವೆಂಕಟಭಟ್ಟರ ಮಗನ ಉಪನಯನಕ್ಕೆ ಮಠದಿಂದಲೇ ಶ್ರೀಗಳವರು ಧನಸಹಾಯ ಮಾಡಿದರು. ನಿರ್ಗತಿಕರಾಗಿದ್ದ ತಮಗೆ ಆಶ್ರಯವನ್ನಿತ್ತು ಸಲುಹಿದ ಶ್ರೀಗಳವರಿಗೆ ಹೇಗಾದರೂ ಕೃತಜ್ಞತೆ ಸಲ್ಲಿಸಲೇ ಬೇಕೆಂದು ದಂಪತಿಗಳು ಏಕಚಿತ್ತದಿಂದ ಆಲೋಚಿಸುತ್ತಿದ್ದರು.

ಅದರಂತೆ ಸುಧೀಂದ್ರ ತೀರ್ಥರು ಇವರ ಕೃತಜ್ಞತೆಯನ್ನು ಲೋಕ ಕಲ್ಯಾಣಕ್ಕೆ ಉಪಯೋಗಿಸಿಕೊಳ್ಳುವ ವಿಶಾಲ ದೃಷ್ಟಿಯಿಂದ ವೆಂಕಟಭಟ್ಟರಿಗೆ ಯತ್ಯಾಶ್ರಮ ನೀಡುವ ಮುಖಾಂತರ ಸ್ವೀಕರಿಸಿದರು. ಶಾಲಿವಾಹನಶಕ 1545 ನೇಯ ರುಧಿರೋದ್ಗಾರಿ ಸಂವತ್ಸರದ ಫಾಲ್ಗುಣ ಶುದ್ಧ ಬಿದಿಗೆಯ ದಿನ ಕ್ರಮ ಸನ್ಯಾಸವು ನಡೆದು ವೆಂಕಟಭಟ್ಟರಿಗೆ "ಶ್ರೀರಾಘವೇಂದ್ರತೀರ್ಥ" ರೆಂಬ ನೂತನವಾದ ಆಶ್ರಮದ ನಾಮಕರಣವಾಗಿ ಸಮಸ್ತ ರಾಜಮರ್ಯಾದೆಗಳೊಂದಿಗೆ ಮಹಾಪಟ್ಟಾಭಿಷೇಕ ನಡೆಯಿತು. ಅಂದಿನಿಂದ ಇಂದಿನವರೆಗೂ ಜಗತ್ಕಲ್ಯಾಣಕಾರರಾಗಿ, ದೀನದಲಿತ ಜನೋದ್ಧಾರಕರಾಗಿ ಭಕ್ತ ಬಂಧುಗಳಿಂದ ಮಾನ್ಯರಾಗಿ, ಸಾಂಸಾರಿಕ ಕಷ್ಟಕ್ಲೇಶಗಳನ್ನು ಪರಿಹರಿಸಿ ಉಪಶಾಂತಿಯನ್ನು ತಮ್ಮ ಮಹಿಮೆಗಳಿಂದ ನೀಡುತ್ತಾ ವಿರಾಜಮಾನರಾಗಿದ್ದಾರೆ

ಶ್ರೀರಾಘವೇಂದ್ರ ತೀರ್ಥರು ಸುಮಾರು ನಲ್ವತ್ತು ಗ್ರಂಥಗಳನ್ನು ರಚಿಸಿ ಪಾಂಡಿತ್ಯದ ಪರಿಮಳವನ್ನು ಹೊರಸೂಸಿದ್ದಾರೆ. ಐತರೇಯ ಉಪನಿಷತ್ತನ್ನು ಬಿಟ್ಟು, ಒಂಬತ್ತು ಉಪನಿಷತ್ತುಗಳ ಖಂಡಾರ್ಥಗಳನ್ನು ರಚಿಸಿರುವರು. ಗೀತಾ ವಿವೃತಿ, ಗೀತಾ ತಾತ್ಪರ್ಯ, ಪ್ರಮೇಯ ದೀಪಿಕಾ ಹೀಗೆ ಗೀತಾ ಪ್ರಸ್ಥಾನಕ್ಕೆ ಸೇರಿದ ಮೂರು ಗ್ರಂಥಗಳು ಮುಂತಾದ ಗ್ರಂಥ ರಚನೆಯಿಂದ ಪ್ರಸಿದ್ಧರಾಗಿದ್ದಾರೆ. ಇವರ ವಿದ್ವತ್ತನ್ನು

> ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ
> ಭಗವತ್ಪಾದ ಲಬ್ಧಾಂಕುರಶ್ರೀಃ ।
> ಪತ್ರೈರೀಷತ್ಪ್ರಭಿನ್ನೋ ಜನಿ ಜಯಮುನಿನಾ
> ಸಮ್ಯಗುದ್ಭಿನ್ನ ಶಾಖಃ ॥
> ಮೌನೀಶ ವ್ಯಾಸ ರಾಜಾದುದಿತ ಕಿಸಲಯಃ
> ಪುಷ್ಪಿತೋಯಂ ಜಯೀಂದ್ರಾದದ್ಯ ।
> ಶ್ರೀರಾಘವೇಂದ್ರಾ ದ್ವಿಲಸತಿ ಫಲಿತೋ
> ಮಧ್ವ ಸಿದ್ಧಾಂತ ಶಾಖೀ ॥

—ವೇದವ್ಯಾಸರು ಬಿತ್ತಿದ ಬ್ರಹ್ಮಸೂತ್ರರೂಪದ ಬೀಜವು ಶ್ರೀಮದಾನಂದ ತೀರ್ಥರಿಂದ ಅಂಕುರಿಸಿ ಟಿಪ್ಪಣಿಕಾರರಿಂದ ಮೊಳಕೆಯಾಯಿತು. ಶ್ರೀಜಯತೀರ್ಥರ ಗ್ರಂಥಗಳಿಂದ ಶಾಖೋಪಶಾಖೆಗಳುಳ್ಳ ವೃಕ್ಷವಾಗಿ ಬೆಳೆಯಿತು. ಶ್ರೀವ್ಯಾಸ ತೀರ್ಥರಿಂದ ಪೋಷಿತವಾಗಿ ಎಲೆಗಳನ್ನು ಬಿಟ್ಟಿತು ಶ್ರೀ ಜಯೀಂದ್ರ ತೀರ್ಥರಿಂದ ಹೂಗಳು ಬಿಟ್ಟವು. ಶ್ರೀರಾಘವೇಂದ್ರ ತೀರ್ಥರ ಉಚ್ಚಟಿಪ್ಪಣಿಗಳಿಂದ ಮಧ್ವ ಸಿದ್ಧಾಂತ ಕಲ್ಪವೃಕ್ಷವಾಗಿ ಸಜ್ಜನರಿಗೆ ಅಮೃತಮಯವಾಯಿತು ಎಂದು ಸ್ತೋತ್ರ ಮಾಡಲಾಗಿದೆ.

ಶ್ರೀರಾಘವೇಂದ್ರ ತೀರ್ಥರಿಂದ ದಾಸಸಾಹಿತ್ಯವು ಸಹ ಸಮೃದ್ಧಿಯನ್ನು ಪಡೆಯಿತು. ಮಂತ್ರಾಲಯದ ಕ್ಷೇತ್ರ ಹರಿದಾಸರ ಪ್ರಮುಖ ಕೇಂದ್ರವಾವಾಗಿದ್ದಲ್ಲದೇ ಶಿಥಿಲವಾಗುತ್ತಿದ್ದ ದಾಸ ಸಾಹಿತ್ಯ ಜೀವಕಳೆ ತುಂಬುವಂತಾಯಿತು. ಆಗ ವಿಜಯದಾಸರು, ಜಗನ್ನಾಥದಾಸರು, ಗೋಪಾಲದಾಸ ಇನ್ನು ಮೊದಲಾದವರು ಬೆಳಕಿಗೆ ಬಂದು ವೈದಿಕ ಧರ್ಮ ಬಲವಾಯಿತು. ಈ ಮಹಾಕಾರ್ಯಕ್ಕೆ ಅಂತಃಸತ್ವವನ್ನು ತುಂಬಿದ ಶ್ರೀರಾಘವೇಂದ್ರರನ್ನು

> ನಿರುತ ಮಂತ್ರಾಲಯ ಪುರವಾಸ ಅಘನಾಶ
> ಸಿರಿವಿಜಯ ವಿಠಲನ್ನ ಚರಣ ಭಜಿಪ ಗುರುವೆ

ಎಂದು ವಿಜಯದಾಸರು ಸ್ಮರಿಸಿರುವರು. ಜಗನ್ನಾಥದಾಸರು ಭಾವಪರ ವಶರಾಗಿ,

> ಎದ್ದು ಬರುತಾರೆ ನೋಡಿ ತಾವೆದ್ದು ಬರುತಾರೆ
> ನೋಡಿ
> ಮುದ್ದು ಬೃಂದಾವನ ದೊಳಗಿದ್ದು
> ತಿದ್ದಿ ಹಚ್ಚಿದ ನಾಮ ಮುದ್ರೆಗಳೊಪ್ಪುತ
> ಗಳದೊಳು ಶ್ರೀ ತುಳಸಿ ನಳಿನಾಕ್ಷಿ ಮಾಲೆಯು
> ಚಲುವ ಮುಖದೊಳು ಪೊಳೆವ ದಂತಗಳಿಂದ
>
> ಹೃದಯ ಮಂದಿರದಲ್ಲಿ ಪದುಮನಾಭನ ಭಜಿಸಿ
> ಮುದ ಮನದಲಿ ನಿತ್ಯ ಸದಮಲರೂಪ ತಾಳಿ
> ದಾತ ...............................
> .....................................

ಎಂದು ಹಾಡಿ ಹೊಗಳಿದ್ದಾರೆ. ಗೋಪಾಲದಾಸರಂತೂ ಪೂಜ್ಯ ಭಾವದಿಂದ ಗುರುರಾಘವೇಂದ್ರರಿರುವ ಮಂತ್ರಾಲಯ ಹಾಗೂ ಅದರ ಮಹಿಮೆಯನ್ನು

> ಧರೆಯೊಳಗೆ ನಮ್ಮ ಗುರುರಾಘ ವೇಂದ್ರರಿನ್ನು
> ಇರುತಿಪ್ಪ ವಿವರವ ಅರಿತಷ್ಟು ವರ್ಣಿಸುವೆ
> ಸ್ಥಿರವಾಗಿ ಮಂತ್ರಾಲಯದ ಪುರ ತುಂಗಾ
> ತೀರದಿ
> ಹರಿಭಕ್ತ ಪ್ರಹ್ಲಾದ ವರಿಯುಗ ಇಲ್ಲಿ ಮಾಡಿ
> ಸುರರಿಗಮೃತ ಉಣಿಸಿ ಪರಿ ಪರಿ ಕ್ರಿಯಾ
> ಮಾಡಿ
> ಪರಿಶುದ್ಧನೆಂದು ಅರಿತು ಈ ಸ್ಥಳದಲ್ಲಿ
> ಗುರುರಾಘವೇಂದ್ರ ರಾಯ ಶರೀರ ಪೋಗಾಡಿ
> ಸಿಲ್ಲಿ

—ಎಂದು ಹಾಡಿ ಹೊಗಳಿದ್ದಾರೆ.

ಕಲಿಯುಗದಲ್ಲಂತೂ ದೇವರೆಂದರೆ ತಿರುಪತಿಯ ತಿಮ್ಮಪ್ಪ, ಗುರುವೆಂದರೆ ಮಂಚಾಲೆಯ ರಾಘಪ್ಪ ಎಂದು ಮನೆ ಮಾತಾಗಿದೆ. ತಮ್ಮ ಗ್ರಂಥಗಳ ಮೂಲಕ ಭಾರತೀಯ ದಾರ್ಶನಿಕವಾಙ್ಮಯಕ್ಕೂ ಶ್ರೀರಾಘವೇಂದ್ರ ತೀರ್ಥರು ಪುಟವಿಟ್ಟ ಚಿನ್ನದಂತೆ ಶೋಭಾಯಮಾನರು. ★

# ಶ್ರೀ ವೆಂಕಟೇಶ ಸ್ತುತಿ

- ಶ್ರೀ ಜಿ. ಚೆನ್ನಯ್ಯ

ಶ್ರೀ ವೆಂಕಟೇಶನೆ! ಶೇಷಾದ್ರಿ ಸದನ!
ಸಿಂಹಾಚಲೇಶನೆ! ಶ್ರೀದೇವಿರಮಣ!
ಸರ್ವ ಮಾನವರನ್ನು ಸಂರಕ್ಷಿಸುವನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 1

ಶ್ರೀ ಆದಿಕೇಶವ! ಶ್ರೀ ಹೃಷೀಕೇಶ!
ವಾಮನಾಕಾರನೆ! ವಸುದೇವ ಸುತನೆ!
ಅಖಿಲ ಲೋಕದಿ ಮಹನೀಯನಾಗಿಹನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 2

ಪಾತಾಳದಿಂದೆತ್ತಿ ವಸುಧೆಯನು ತಂದು
ಜಂತು ಸಂತತಿಯೆಲ್ಲ ಸಂತೋಷ ಪಡಲು
ಎಂದಿನಾ ಚೆಂದವಾಗಿರಿಸಿದಾ ಪ್ರಭುವೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 3

ಅಮರಾಬ್ಧಿ ಮಥನದೊಳ್ ಅಮೃತವ ಪಡೆದು
ಸರ್ವದಾ ವಾತ್ಸಲ್ಯ ಜನರಲ್ಲಿ ತೋರಿ
ಗರುಡಾದ್ರಿಯೊಳಗೆ ಸಾಕಾರನಾಗಿಹನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 4

ಅಮರೇಂದ್ರ! ಸಲಹಿದ್ದೆ ಅಮರರೆಲ್ಲರನು
ಅಮೃತವ ನೀಡಿ ನೀ ಅನುಕಂಪದಿಂದ
ಪರರಲ್ಲಿ ನೀನೆಂದು ಬಯಸುವೆ ಹಿತವ
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 5

ಸಾಸಿರ ಸಂಖ್ಯೆಯೊಳ್ ಸ್ವಾಮಿ! ನೀ ತಳೆವೆ
ಕಣ್ಗಳು ತಲೆಗಳು ಕಾಲ್ಗಳೊಮ್ಮೊಮ್ಮೆ
ಆ ನಿನ್ನ ನಿಜರೂಪವನಾರು ಕಂಡಿಹರು?
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 6

ಅನುಮಾನವಿಲ್ಲದಾ ಯತ್ನದಿಂದೊಮ್ಮೆ
ಜ್ಞಾನದಿಂದಲಿ ಮಾತ್ರ ಕಾಣಲಾಗುವುದು
ಆಕಾಶದಂತಿಹಾ ಆ ನಿನ್ನ ಸೊಬಗ
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 7

ಸಗುಣಾತ್ಮ ನಿರ್ಗುಣ ಜ್ಞಾನಾತ್ಮನಣಿಮ
ಮಹನೀಯ ಗುಣವುಳ್ಳ ಮಹಿತಾತ್ಮನೆನುತ
ಬಹುರೀತಿ ಜನ ನಿನ್ನ ಬಣ್ಣಿಸುತ್ತಿರುವರೈ
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 8

ದಿವ್ಯಾವಯವಗಳ ದೀಪ್ತಿಯ ತಳೆದು
ನಿತ್ಯ ಸುಂದರದೇಹ ನೀನೆನ್ನುತಿಹರು
ಜನರಲ್ಲಿ ಕೆಲರದೇ ಸಮ್ಮತವೆಮಗು
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 9

ಅಚ್ಯುತ! ಗೋವಿಂದ! ಆದ್ಯನೆ! ಹರಿಯೆ!
ಮೌನಿವರ್ಯರ್ ಮಾನ್ಯ ಮನುಜರು ಗೈವ
ನಿನ್ನಯಾ ಸ್ತುತಿಕೇಳಿ ನಿನ್ನ ಸೇರಿಹೆವು
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 10

ಮಹಿತಾತ್ಮ! ಲೀಲೆಯಾ ಮಾನುಷಾಕಾರ!
ಸೃಷ್ಟಿಕರ್ತಾರನು ಸೃಷ್ಟಿರಕ್ಷಕನು
ಸೃಷ್ಟಿನಾಶಕನಾದ ಶ್ರೀ ವಿಷ್ಣುದೇವ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 11

ಪ್ರಭವಕಾರಣನಾಗಿ ಪ್ರಕೃತಿಗೆ ನೀನೆ
ಜಗವೆಲ್ಲ ಮುಳುಗಿಸಿ ಜಲಧಿಯೊಳ್ ಕೊನೆಗೆ
ಏಕಾಂಗಿಯಾಗುವೆ ಎನುವರೈ ಬುಧರು
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 12

ನಿನ್ನ ಹೊಟ್ಟೆಯೊಳಿಟ್ಟು ನಿಖಿಲ ಜೀವಗಳ
ರಮ್ಯ ವಿಗ್ರಹನಾಗಿ ರಮೆಯನ್ನು ಕೂಡಿ
ಕ್ರೀಡಿಸುತ್ತಿರುವಂಥ ಶ್ರೀಮಹಾದೇವ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 13

ಉದರದೊಳ್ ಬ್ರಹ್ಮಾಂಡ ಹೊತ್ತುಕೊಂಡಿಹನೆ
ಬಾಹ್ಯಾಂತರಿಂದ್ರಿಯ ಪ್ರಕೃತಿಗಳನ್ನು
ಸೃಷ್ಟಿಮಾಡುವೆ ನೀನೆ ಶ್ರೀವೆಂಕಟೇಶ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 14

ಶ್ರೀರಮಾ ಲೋಲನೆ! ಶ್ರಿತಭಕ್ತಪಾಲ!
ಶಾಂತಸ್ವಭಾವನೆ! ಸೌಜನ್ಯನಿಲಯ!
ಅದ್ಭುತಕಾರ್ಯನೆ! ಯದುವಂಶಮಣಿಯೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 15

ಶ್ರೀಲಕ್ಷ್ಮಿಗೇಹನೆ! ಚೆಲುವಚೆನ್ನಿಗನೆ!
ಎಲ್ಲ ಕಾಲವು ನಾಶವಿಲ್ಲದಂತಿಹನೆ!
ಗಣಿಸಲಾಗದ ಶೀರ್ಷಗಣ ಹೊಂದಿದವನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 16

ಶ್ರೀಪರಬ್ರಹ್ಮನೆ! ಶ್ರೀದೇವಿಪ್ರಿಯನೆ!
ಅಗಣಿತಾಯುತ ಹಸ್ತ! ಅಚ್ಯುತಾಕೃತಿಯೆ!
ಶೇಷಾದ್ರಿ ಪರ್ವತ ಶಿಖರಮಂದಿರನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 17

ನೀಬ್ರಹ್ಮ ನೀ ರುದ್ರ ನೀ ನಿರ್ಜರೇಂದ್ರ
ನೀ ಚಂದ್ರ ನೀ ಸೂರ್ಯ ನೀನಶ್ವಿಸುರರು
ವಿಶ್ವಸ್ವರೂಪನೆ! ವಿಶ್ವವಲ್ಲಭನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 13



ಸಾಸಿರಸೂರ್ಯರಾ ಸಮತೇಜವದನನೆ!
ಕೈಗಳೊಳ್ ಶಂಖಚಕ್ರಂಗಳುಳ್ಳವನೆ!
ಅತುಲ ಸ್ವಭಾವ! ಮಹವಿಷ್ಣುದೇವ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 19

ಮಹನೀಯವಾದಂಥ ಮಕುಟವುಳ್ಳವನೆ!
ದಿವ್ಯಕೌಸ್ತುಭರತ್ನ ದೀಪ್ತಿಸಂಯುತನೆ!
ಪರಮಾತ್ಮ! ಶುಭನೀಲ ವಾರಿದಶ್ಯಾಮ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 20

ದಿವ್ಯಕಾಂತಿಗಳುಳ್ಳ ದೇಹದೊಳ್ ಹೊಳೆವ
ಕೈಗಳಲ್ಲಿಹ ಶಕ್ತಿ ಖಡ್ಗ ಚಾಪಗಳ
ಗದೆ ತೋಮರಂಗಳ ಕಮನೀಯ ತೇಜ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 21

ಅಂಭೋಜನಾಭನೆ! ಯಜ್ಞನಾಯಕನೆ!
ಸೊಗಸಾದ ಟಿವಿಯೋಲೆ ಸೂಡಿಕೊಂಡಿಹನೆ!
ಸಕಲ ಲೋಕಂಗಳಾ ಜನ್ಮಕಾರಣನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 22

ಅತಿನೀಲದೇಹನೆ! ಆ ಹಿರಣ್ಯಾಕ್ಷ
ಕಾಲನೇಮಿ ಹಿರಣ್ಯಕಶಿಪು ಮುಂತಾದ
ಅಮರಾರಿಗಳ ಕೊಂದೆ ಅಮರರಕ್ಷಕನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 23

ಮೂಲಕಾರಣಹೀನ! ಭುವನೋಗ್ರಮೂರ್ತಿ!
ಶ್ರೀನರಸಿಂಹನೆ! ಶ್ರಿತಜನಾವಳಿಗೆ
ವರದಾನವೀವನೆ! ವಾರಿಜೋದರನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 24

ಬ್ರಹ್ಮನು ಕಾಣದ ಪರಮಪಾವನವು
ಸಕಲಾಸ್ತ್ರ ಸಹಿತವು ಸಕಲಾರ್ಚ್ಯವಾದ
ಈ ವಿಶ್ವರೂಪವ ಇಂದುಕಂಡಿಹೆವು
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 25

ವರವೆಂಕಟೇಶನೆ! ಪರಮಪಾವನನೆ!
ಸರ್ವದೇವಾಧಿಪ! ಶಾಶ್ವತಸ್ವರೂಪ!
ಗದೆಯು ಶಂಖವು ಚಕ್ರ ಕೈಗಳಲ್ಲಿಹನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 26

ಭುವನಗಳ್ ಸೃಷ್ಟಿಸಿ ಪೋಷಿಸಿ ಕಡೆಗೆ
ಮುಕ್ತಾಯ ಗೈವ ತ್ರಿಮೂರ್ತಿ ಸ್ವರೂಪ!
ಹವ್ಯಕ್ಕು ಕವ್ಯಕ್ಕು ಆಕಾರನೀನೆ
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 27

ಶ್ರೀಲಕ್ಷ್ಮಿ ರಮಣನೆ! ಸೃಷ್ಟಿಕಾರಣನೆ!
ಪರತತ್ವರೂಪನೆ! ಬ್ರಹ್ಮಾದಿ ನತನೆ!
ಸಕಲ ಲೋಕಾತೀತ! ಶಶಿ ಸೂರ್ಯ ನೇತ್ರ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 28

ಜಾತಿ ಮುಂತಾದಂಥ ಸಂದೇಹರಹಿತ!
ಅಖಿಲ ದೋಷವಿದೂರ! ಅಸುರಸಂಹಾರ!
ಸಂಸಾರ ಸಂತಾಪ ಸರ್ವಾಪಹಾರ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 29

ಶ್ರೀಹರಿ! ಶ್ರೀಲೋಲ! ವೃಷಶೈಲನಿಲಯ!
ಜನದುಃಖ ನಾಶಕ! ಚತುರಾಸ್ಯಜನಕ!
ವೇದಾಂತ ವೇದ್ಯನೆ! ವಿಕ್ರಮಾಧಿಕನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 30

ವೈಭವೋಪೇತನೆ! ವಸುದೇವ ಸುತನೆ!
ಶಕ್ತ ಪಾರಮ್ಯನೆ! ಶಾರ್ಙ್ಗ ಕಾರ್ಮುಕನೆ!
ಶ್ರೀ ವೆಂಕಟಾಚಲ ಶಿಖರಮಂದಿರನೆ!
ಅನುನಿತ್ಯ ನಿನಗೆಮ್ಮ ಅಭಿವಾದ ತಂದೆ! 31 ★

## ಕಿಶೋರ ಜಗತ್

# ಮುಕ್ತಿ ಮಾರ್ಗ

ಬಹಳ ಹಿಂದಿನ ಕಾಲದ ವಿಷಯ. ಓರ್ವ ಮಹಾತ್ಮರಿದ್ದರು. ಅವರು ಪರಮಾತ್ಮನನ್ನು ದರ್ಶಿಸುವುದರೊಂದಿಗೆ, ಅವನೊಂದಿಗೆ ಮಾತು ಕತೆಯನ್ನೂ ಆಡುತ್ತಿದ್ದರು. ಒಂದು ದಿನ ಓರ್ವ ಬಡವನು ಈ ಮಹಾತ್ಮರನ್ನು ದರ್ಶಿಸಲು ಬಂದನು. ಅವರೊಂದಿಗೆ ಮಾತು ಕತೆಯಾಡುತ್ತಾ, ಕಾತರಗೊಂಡ ಧ್ವನಿಯಲ್ಲಿ ಕೇಳಿದ!

"ಮಹಾತ್ಮರೆ! ನಾನೀಗ ಎಲ್ಲವನ್ನೂ ಕಳೆದುಕೊಂಡ ದರಿದ್ರನಾಗಿದ್ದೇನೆ. ದಿನಗಳು ಉರುಳಿದಂತೆಲ್ಲ ಹೆಚ್ಚು ಹೆಚ್ಚು ಬಡವನಾಗುತ್ತಲಿದ್ದೇನೆ ಈಗಂತೂ ನನ್ನ ಬಳಿ ಏನೂ ಇಲ್ಲ. ಮೂರು ದಿನಗಳ ಹಿಂದೆ ನನ್ನ ಪುರುಕುಲು ಗುಡಿಸಿಲೂ ಕೂಡ ಸುಟ್ಟು ಭಸ್ಮ ವಾಯಿತು. ಈಗ ನಾನು ರಸ್ತೆ ಬದಿಯ ಭಿಕ್ಷುಕನಾಗಿದ್ದೇನೆ. ಪರಮಾತ್ಮನು ಏನನ್ನು ನೀಡಿದರೂ ಚೆನ್ನಾಗಿ ವಿಮರ್ಶಿಸಿ ನೀಡುತ್ತಾನಲ್ಲವೆ? ಹಾಗಿದ್ದರೆ ನನಗೇಕೆ ಈ ಸ್ಥಿತಿ? ಅಥವಾ ಅವನು ಹೇಗೆ ಕೊಡುತ್ತಾನೋ ಹಾಗೆಯೆ ಎಲ್ಲವನ್ನೂ ತೆಗೆದು ಕೊಳ್ಳುವನಲ್ಲ! ಇದು ಹೀಗೆ? ಇದಕ್ಕೆ ಕಾರಣವೇನು ತಿಳಿಸಿ ಮಹಾಶಯ!"

ಆ ಬಡವನ ಮಾತನ್ನು ಕೇಳಿ ಮಹಾತ್ಮರು ಮನಸ್ಸಿನಲ್ಲಿ ಯೋಚಿಸ ತೊಡಗಿದರು. ಅವನ ಹೇಳುವಿಕೆಯ ಯಥಾರ್ಥವೇನು? ಇಂತಹ ಸನ್ನಿವೇಶ ಈ ಪ್ರಪಂಚದಲ್ಲಿ ಅನೇಕವು ಸಂಭವಿಸಿವೆ. ಇದರ ಆಳವಾದ ಮೀಮಾಂಸೆಯೂ ಆಗಲೇ ಬೇಕು, ಹೀಗೆ ಮನಸ್ಸಿನಲ್ಲಿ ಚಿಂತಿಸಿ, ಆ ಬಡ ಭಕ್ತನಿಗೆ ಹೇಳಿದರು "ಒಳ್ಳೆಯದು! ಈಗ ನೀನು ಹೋಗು! ಸಮಯ ನೋಡಿಕೊಂಡು ಪರಮಾತ್ಮನೊಂದಿಗೆ ಇದರ ಬಗ್ಗೆ ನಿನ್ನ ವಿಷಯದ ಬಗ್ಗೆ ಚರ್ಚಿಸುವೆ". ಬಡವನು ಹೊರಟು ಹೋದನು.

ಸಮಯ ನೋಡಿಕೊಂಡು ಮಹಾತ್ಮರು ಪರಮಾತ್ಮನಲ್ಲಿ ಈ ವಿಷಯವನ್ನು ಪ್ರಸ್ತಾಪಿಸುತ್ತಾ,

"ಪ್ರಭು! ನೀನಂತೂ ನಿನ್ನ ಭಕ್ತರ ಯೋಗಕ್ಷೇಮಗಳನ್ನು ನೋಡಿ ಕೊಳ್ಳುವವನು. ಆಗಾಗ್ಗೆ ಅವರಿಗೆ ಅಷ್ಟೊಂದು ದುಃಖವನ್ನು ಏಕೆ ನೀಡುವೆ?"

ಎಂದು ಪ್ರಶ್ನಿಸಿದರು. ಪರಮಾತ್ಮನು ಇದನ್ನು ಆಲಿಸಿ ನಸುನಕ್ಕು ಹೇಳಿದನು.

"ಇದರ ಬಗೆಗೆ ಉತ್ತರವನ್ನು ಆಮೇಲೆ ಕೊಡುತ್ತೇನೆ. ಮೊದಲು ನನಗಾಗಿ ಒಂದು ಕೆಲಸವನ್ನು ಮಾಡಿಕೊಡು. ನನಗೆ ಅತ್ಯಗತ್ಯವಾಗಿ ಒಂದು ಇಟ್ಟಿಗೆಯು ಬೇಕಾಗಿದೆ ಅದನ್ನು ಬೇಗನೆ ತಂದು ಕೊಡು".

ಮಹಾತ್ಮರು ಪರಮಾತ್ಮನಿಗೆ ಇಟ್ಟಿಗೆಯನ್ನು ತಂದು ಕೊಡಲು ಹೊರಟರು. ನಗರವನ್ನು ಪ್ರವೇಶಿಸಿದರು. ಅಲ್ಲಿ ನೋಡಿದರೆ ಇಟ್ಟಿಗೆಯಿಂದ ನಿರ್ಮಿತವಾದ ಭವ್ಯಭವನಗಳಿದ್ದವು. ಅವುಗಳಿಂದ ಒಂದು ಇಟ್ಟಿಗೆಯನ್ನು ಹೊರತೆಗೆಯಲೂ ಅವರು ಇಷ್ಟಪಡಲಿಲ್ಲ.

ನಂತರ ಅವರು ಬಡವರು ವಾಸಿಸುವ ಬಡಾವಣೆಗೆ ಹೋದರು. ಅಲ್ಲಿನ ಚಿಕ್ಕ ಚಿಕ್ಕ ಮನೆಗಳು ಗುಡಿಸಿಲುಗಳು, ಬಹಳಷ್ಟು ಮುರಿದು ಬಿದ್ದಿದ್ದವು. ಅವುಗಳಲ್ಲಿ ಒಂದು ಮನೆಮಾತ್ರ ಅರ್ಧ ಮುರಿದು ಬಿದ್ದಿತ್ತು. ಉಳಿದರ್ಧ ಬಿದ್ದುಹೋಗುವುದರಲ್ಲಿತ್ತು. ಮಹಾತ್ಮರು ಆ ಮನೆಯಿಂದ ಒಂದು ಇಟ್ಟಿಗೆಯನ್ನು ತೆಗೆದು ಕೊಂಡು ಪರಮಾತ್ಮನ ಬಳಿಗೆ ಬಂದರು.

ಪರಮಾತ್ಮನು ಪ್ರಶ್ನಿಸಿದನು.

"ಹೇಳು ಈ ಇಟ್ಟಿಗೆಯನ್ನು ಎಲ್ಲಿಂದ ತಂದೆ?"

ಮಹಾತ್ಮರು ಉತ್ತರಿಸಿದರು.

"ಆ ಬಡವರ ಬಡಾವಣೆಯಲ್ಲಿನ ಓರ್ವ ಬಡವನ ಅರ್ಧ ಮುರಿದು ಬಿದ್ದಿದ್ದ ಮನೆಯಿಂದ ತಂದೆ."

ಇದನ್ನು ಆಲಿಸಿ ಪರಮಾತ್ಮನ ಹೇಳಿದನು

"ನೀನು ಒಳ್ಳೆಯ ಕೆಲಸವನ್ನು ಮಾಡಲಿಲ್ಲ. ಸುಂದರವಾದ ಭವ್ಯ ಭವನಗಳಿದ್ದಾಗ್ಯೂ. ಅರ್ಧ ಬಿದ್ದು ಹೋಗಿರುವ ಮನೆಯಿಂದ ಇಟ್ಟಿಗೆಯನ್ನು ತಂದಿದ್ದೀಯ! ಇದು ಸರಿಯಿಲ್ಲ!"

ಆಗ ಮಹಾತ್ಮರು ಹೇಳಿದರು.

"ಪ್ರಭೂ! ಸುಂದರ ಭವನಗಳಲ್ಲಿನ ಗೋಡೆಗಳಲ್ಲಿನ ಒಂದು ಇಟ್ಟಿಗೆಯನ್ನೂ ತೆಗೆದರೂ ಅವುಗಳ ಸೌಂದರ್ಯ ನಾಶವಾಗುತ್ತದೆ. ಆದರಿಂದ ಅರ್ಧ ಭಗ್ನವಾದ ಮನೆಯಿಂದ ಇಟ್ಟಿಗೆಯನ್ನು ತಂದೆ. ಅಲ್ಲದೆ ನಾನು ಇಟ್ಟಿಗೆಯನ್ನು ತೆಗೆಯುತ್ತಲೆ ಉಳಿದಿರುವ ಮನೆಯೂ ಬಿದ್ದು ಹೋಯಿತು ಇನ್ನು ಆ ಸ್ಥಳದಲ್ಲಿ ಹೊಸ ಮನೆಯನ್ನೇ ನಿರ್ಮಿಸಬೇಕು.

ಇದನ್ನು ಆಲಿಸಿ, ಪರಮಾತ್ಮನು ಹೇಳಿದ

"ಭಕ್ತನ ಸರ್ವಸ್ವವನ್ನು ಕಸಿದು ಕೊಳ್ಳುವುದರಲ್ಲಿ ನನ್ನ ಭಾವನೆಯೂ ಇದೇನೆ! ಭಕ್ತರಿಗೆ ಇನ್ನೂ ಹೆಚ್ಚು ಕೊಡಲು ಬಹಳಷ್ಟು ಕೊಡಲು ಅವರಲ್ಲಿರುವ ಅಲ್ಪವನ್ನು ಕಿತ್ತು ಕೊಳ್ಳುವೆನು. ಅವರಿಗೆ ಪಾರಮಾರ್ಥಿಕವನ್ನು ನೀಡಲು, ಈ ಪ್ರಾಪಂಚಿಕ ವಸ್ತುಗಳನ್ನು ಕಿತ್ತುಕೊಳ್ಳುವೆನು. ಅವರಿಗೆ 'ನಿವೃತ್ತಿ' ನೀಡಲು, ಅವರಲ್ಲಿನ 'ಪ್ರವೃತ್ತಿ'ಯನ್ನು ಕಸಿದು ಕೊಳ್ಳುವೆನು ಅಂದರೆ ಅವರ ಬಳಿ ಇರುವ ಮಾಯೆ ಎಂಬ ವಸ್ತುವನ್ನು ಅಪಹರಿಸಿ, ಅವರಿಗೆ ಸನ್ಮಾರ್ಗ ಸದ್ವರ್ತನೆ. ಪ್ರಾಪಂಚಿಕ ವಿಷಯಗಳಲ್ಲಿ ವೈಮುಖ್ಯ. ಅರಿಷಡ್ವರ್ಗಗಳಿಂದ ದೂರವಾಗುವಿಕೆಯನ್ನು ನೀಡಿ, ಮುಕ್ತಿ ಮಾರ್ಗದ ಪಥವನ್ನು ತೋರಿಸುವೆನು. ಇದೇ ಭಕ್ತನ ನಿಜವಾದ ಪರೀಕ್ಷೆ. ಇವರಲ್ಲಿ ಯಾವನು ಉತ್ತೀರ್ಣನಾಗುತ್ತಾನೋ, ಅವನು ನನ್ನ ಕೃಪಾಪಾತ್ರ ನಾಗುವನು".

'ರಘುಸುತ'

# ಪಂಜರದ ಪಕ್ಷಿ

"ನಾನಿದನ್ನು ಕಲಿತಿದ್ದೇನೆ, ಬೇಕಾದರೆ ನೀವೂ ಸಹ ಸುಲಭವಾದ ಈ ವಿದ್ಯೆಯನ್ನು ಕಲಿಯಿರಿ"—

ಎಂದು ಕೂಗುತ್ತ ಒಬ್ಬಾತ ಊರೂರು ಸುತ್ತುತ್ತಿದ್ದ. ಆತ ಮಹರ್ಷಿಯಂತೆ ತೇಜಸ್ವಿಯಾಗಿದ್ದ. ನೋಡಿದರೆ ಸಾಕು ಈತ ಮಹಾ ಜ್ಞಾನಿಯೆಂದು ಯಾರಿಗಾದರೂ ಅರ್ಥವಾಗುತ್ತಿತ್ತು. ಆತನ ಕೈಲೊಂದು ಪಂಜರ. ಅದರಲ್ಲೊಂದು ಕಾಗೆ. ಆತನ ಮೈಮೇಲೆ ಕಾವಿ ಬಟ್ಟೆ ದಂಡ, ಕಮಂಡಲ—ಇಷ್ಟೆ ಆತನ ಆಸ್ತಿ. ಆತನ ಹೆಸರು ಕಾಲಕವೃಕ್ಷೀಯ.

ಈ ವಿದ್ಯೆಯನ್ನು ನೀವೂ ಬೇಕಾದರೆ ಕಲಿಯಿರಿ ಎನ್ನುತ್ತಾನೆ. ಅದೇನು ವಿದ್ಯೆ? ಕಾವಿ ಧರಿಸುವುದೇ ಅಥವ ಕಾಗೆಯನ್ನು ಪಂಜರದಲ್ಲಿಟ್ಟುಕೊಂಡು ಊರೂರು ಸುತ್ತುವುದೆ?

ಆತ ಅಲ್ಲಲ್ಲಿ ಸುತ್ತಾಡುತ್ತ ಕೋಸಲ ರಾಜ್ಯಕ್ಕೆ ಬಂದ. ಈ ಅಲೆಮಾರಿ ಸನ್ಯಾಸಿ ತನ್ನ ಪ್ರಯಾಣದಲ್ಲಿ ಅನೇಕ ಸಂಗತಿಗಳನ್ನು ವಿಚಿತ್ರಗಳನ್ನು ಕಂಡೇ ಇರಬೇಕು. ಕೋಸಲ ರಾಜ್ಯದಲ್ಲಿ ಆಗ ಕ್ಷೇಮದರ್ಶಿಯೆಂಬಾತ ಚಕ್ರವರ್ತಿಯಾಗಿದ್ದ. ದ್ವಾರಪಾಲಕನ ಮೂಲಕ ಈ ವಿಚಿತ್ರ ಸನ್ಯಾಸಿಯ ಆಗಮನ ವಾರ್ತೆ ಕೇಳಿ ಆತನನ್ನು ಅರಮನೆಗೆ ಕರೆತರುವಂತೆ ರಾಜಾಜ್ಞೆಯಾಯ್ತು.

ಕೋಸಲರಾಜ್ಯದ ಅರಮನೆಯೆಂದಮೇಲೆ ಅದರ ವೈಭವ ಅಷ್ಟಿಷ್ಟಲ್ಲ. ನೆಲಕ್ಕೆ ರತ್ನ ಕಂಬಳಿಗಳನ್ನು ಹಾಸಿದ್ದಾರೆ. ಚಿತ್ರವಿಚಿತ್ರವಾದ ವಾದ್ಯಗಳನ್ನು ಸುಮಧುರವಾಗಿ ನುಡಿಸುವ ಕಲಾವಿದರು—ನೃತ್ಯ ಶಾರದೆಯರ ಸಂದೋಹ—ಝಗಝಗಿಸುವ ರತ್ನಪೀಠಗಳ ಮೇಲೆ ಮಂಡಿಸಿರುವ ಮಾಂಡಲಿಕರು – ಮಂತ್ರಿಗಳು – ಗಣ್ಯಮಾನ್ಯಮಹಾಶಯರು. ಎತ್ತರವಾದ ಸಿಂಹಾಸನದ ಮೇಲೆ ಚಕ್ರವರ್ತಿ ಕ್ಷೇಮದರ್ಶಿ ಗಂಭೀರವಾಗಿ ಕುಳಿತಿದ್ದಾನೆ. ಎರಡೂಕಡೆ ನಿಂತು ಚಾಮರ ಬೀಸುವ ಹೆಣ್ಣುಗಳ ಕೈಕಂಕಣಗಳ ಝಣತ್ಕಾರ ತಾಳಬದ್ಧವಾಗಿ ಕೇಳಬರುತ್ತಿದೆ. ಅರಮನೆಯ ಗೋಡೆಗಳ ಮೇಲೆ ರಚಿಸಲ್ಪಟ್ಟಿರುವ ರಾಗರಾಗಿಣಿಯರ ಚಿತ್ರಗಳು ಜೀವಂತವಾಗಿದ್ದು ಬರುವಂತೆ ಕಾಣುತ್ತಿವೆ ಅದೆಷ್ಟು ರಾಜವೈಭವ.

ಪಂಜರದ ಸನ್ಯಾಸಿ ಸಭೆಗೆ ಬಂದ. ಸಾಮ್ರಾಟರಿಗೂ ಮಹಾಸಭೆಗೂ ಗೌರವದಿಂದ ನಮಸ್ಕರಿಸಿದ. ಸಭಾಭವನದ ಸುತ್ತಲೂ ಒಮ್ಮೆ ಹಾಗೆ ಕಣ್ಣು ಹೊರಳಿಸಿ ಎಲ್ಲರನ್ನೂ-ಎಲ್ಲವನ್ನೂ ತೂಗಿ ಅಳೆಯುವಂತೆ ನೋಡಿದ. ಆತನ ತೀಕ್ಷ್ಣವಾದ ಕಣ್ಣುಗಳು ಯಾರನ್ನೋ ಹುಡುಕುತ್ತಿವೆ. ಕೊನೆಗೆ ಮಹಾಮಂತ್ರಿಗಳನ್ನು ಕ್ಷಣಕಾಲ ದಿಟ್ಟಿಸಿ ನೋಡಿದ. ಮಂತ್ರಿಗೂ ಸಹ ಈ ಸನ್ಯಾಸಿಯನ್ನು ಎಂದೋ-ಎಲ್ಲೋ ಕಂಡಂತೆ ಭಾಸವಾಯ್ತು.

"ಮಹಾಮಂತ್ರಿಗಳು ನಾಲ್ಕು ಹೆಜ್ಜೆ ಮುಂದೆ ಬರಬೇಕು — ಎಂದು ನಾನು ಕೇಳುವುದಕ್ಕಿಂತಲೂ ಪ್ರಭುಗಳು ಸೂಚಿಸುವುದೇ ಹೆಚ್ಚು ಸೂಕ್ತವೆಂದು ಕಾಣುತ್ತವೆ."—

ಕಾಲಕವೃಕ್ಷೀಯ ಸಿಂಹಾಸನದತ್ತ ನೋಡುತ್ತ ಹೇಳಿದ. ಇಂಗಿತವರಿತ ಮಹಾಮಂತ್ರಿಗಳು ನಾಲ್ಕು ಹೆಜ್ಜೆ ಮುಂದೆ ಬಂದರು. ಇದೇನು ವಿಚಿತ್ರವೆಂದೆಲ್ಲರಿಗೂ ಕುತೂಹಲ.

ಸನ್ಯಾಸಿ ಪಂಜರವನ್ನಲ್ಲಿಟ್ಟು ಹೇಳಿದ— ಮಹಾಮಂತ್ರಿಗಳೇ, ತಾವು ರಾಜಧನವನ್ನಪಹರಿಸಿದ್ದೀರಿ. ಎಲ್ಲಿ—ಎಂದು-ಎಷ್ಟು ಎಂದು ಸಹ ನಾನು ಹೇಳಬಲ್ಲೆ. ನುತ್ತು ಆ ದಿನ ನಿಮ್ಮ ಜತೆಯಲ್ಲಿದ್ದ ವ್ಯಕ್ತಿಗಳ ಹೆಸರು ಬೇಕಾದರೂ ನಾನು ಹೇಳಬಲ್ಲೆ. ಪಂಜರದ ಕಾಗೆ ಎಲ್ಲವನ್ನೂ ಹೇಳಿದೆ. ಅದೆಂದೂ ಸುಳ್ಳಾಡುವ ಹಕ್ಕಿಯಲ್ಲ.

ಸನ್ಯಾಸಿಯ ಮಾತು ಸಿಡಿಲು ಬಿದ್ದಂತಾಯ್ತು—ಸಭೆ ಚಕ್ಕಬಕ್ಕರಿಗಾಯ್ತು.

ಸನ್ನಿವೇಶದ ಗಾಂಭೀರ್ಯವನ್ನರಿತ ಸಾಮ್ರಾಟ ಸಭೆ ಇಲ್ಲಿಗೆ ಮುಗಿದಿದೆ—ಪುನಃ ನಾಳೆ ಸೇರೋಣವಾಗಲಿ—ಎಂದು ಸೂಚಿಸಿದ. ಸನ್ಯಾಸಿಯತ್ತ ಇಂಗಿತ ದೃಷ್ಟಿಯಿಂದ ನೋಡುತ್ತ ಭದ್ರಪೀಠವನ್ನು ಬಿಟ್ಟು ಒಳಕ್ಕೆ ಹೊರಟು ಹೋದ. ಸನ್ಯಾಸಿಗೆ ಭಿಕ್ಷೆ—ವಿಶ್ರಾಂತಿ ಎಲ್ಲವೂ ಆ ದಿನ ಅರಮನೆಯಲ್ಲೇ ಏರ್ಪಾಟಾಗಿತ್ತು.

ಸಭಿಕರೆಲ್ಲರೂ ಗುಜುಗುಜು ಮಾತಾಡುತ್ತ ಹೊರಟುಹೋದರು. ಮಂತ್ರಿಗೆ ತುಂಬ ಮುಜಗರವಾಯ್ತು. ಮನಸ್ಸಿಗೆ ಕಸಿವಿಸಿಯಾಯ್ತು. ಆದರೆ ಸಹಜ ಗಂಭೀರನಾದ ಆತ ಯಾವ ಭಾವೋದ್ವೇಗವನ್ನು ತನ್ನ ಮುಖದಲ್ಲಿ ತೋರ್ಪಡಿಸಲಿಲ್ಲ. ಎಂದಿನಂತೆ ಮುಗುಳ್ನಗೆ ಬೀರುತ್ತ ಹೊರಟು ಹೋದ.

ಸನ್ಯಾಸಿ ಕಾಲಕವೃಕ್ಷೀಯನಿಗೆ ರಾಜೋಪಚಾರವೆಲ್ಲವೂ ಆಯ್ತು. ರಾತ್ರಿ ಕಳೆದು ಬೆಳಗಾದ ಕೂಡಲೇ ನೋಡುತ್ತಾನೆ. ಪಂಜರದಲ್ಲಿದ್ದ ಕಾಗೆ ಸತ್ತು ಬಿದ್ದಿದೆ!! ಸನ್ಯಾಸಿ ಕ್ಷಣಮಾತ್ರದಲ್ಲಿ ಎಲ್ಲವನ್ನೂ ಗ್ರಹಿಸಿದ. ನೇರವಾಗಿ ಚಕ್ರವರ್ತಿಯ ಬಳಿಗೆ ಬಂದು ಅಭಯ ಪ್ರದಾನ ಮಾಡಬೇಕೆಂದು ವಿನಂತಿಸಿಕೊಂಡ. ತನ್ನ ಕಾಗೆಯ ಸಾವಿನ ಸುದ್ದಿ ಅರಿಕೆಮಾಡಿದ. ಅಪ್ಪಣೆಯಾದರೆ ಕೆಲವು ವಿಚಾರಗಳನ್ನು ಏಕಾಂತದಲ್ಲಿ ಪ್ರಸ್ತಾಪ ಮಾಡಬಯಸುತ್ತೇನೆ ಎಂದು ಬಿನ್ನವಿಸಿಕೊಂಡ.

ಈ ವಿಚಿತ್ರ ವಿದ್ಯಮಾನವನ್ನು ಗಮನಿಸಿದ ಸಾಮ್ರಾಟ ಹೇಳಿದ— ಕ್ಷೇಮದರ್ಶಿಯ ಸನ್ನಿಧಾನದಲ್ಲಿ ನಿಮ್ಮ ಕ್ಷೇಮಕ್ಕೂ ಯಾರ ಕ್ಷೇಮಕ್ಕೂ ಚ್ಯುತಿಯಿಲ್ಲ. ನೀವು ನಿರ್ಭಯವಾಗಿರಬಹುದು. ಧೈರ್ಯವಾಗಿ ಮಾತಾಡಬಹುದು. ಕೇಳಬೇಕಾದ್ದನ್ನು ಯಾವ ವಿಧ

**ವಿದ್ವಾನ್ ಬ. ನ. ಗುಂಡೂರಾವ್**

ವಾದ ಸಂಕೋಚವೂ ಇಲ್ಲದೆ – ಸುಸ್ಪಷ್ಟವಾಗಿ ಹೇಳಬಹುದು. ಇಲ್ಲಿ ಯಾವ ಭಯಕ್ಕೂ ಅವಕಾಶವಿಲ್ಲ.

ರಾಜನ ಈ ಅಭಯವಚನ ಸನ್ಯಾಸಿಗೆ ಧೈರ್ಯ ತುಂಬಿದಂತಾಯ್ತು.

'ಮಹಾಪ್ರಭು—ನಿಮ್ಮ ಉಪ್ಪುತಿಂದು ಜೀವಿಸಿರುವವರಿಂದ ನಿಮಗೆ ಇದುವರೆಗೆ ತುಂಬ ನಷ್ಟವಾಗಿದೆ. ಇನ್ನು ಭಾರಿ ವಿಪತ್ತು ಬರಲಿದೆಯೆಂಬುದೂ ಸಹ ಸತ್ಯ. ಈ ಎಚ್ಚರಿಕೆ ಕೊಡುವುದಕ್ಕಾಗಿಯೇ ನಾನು ಸನ್ನಿಧಾನಕ್ಕೆ ಬಂದದ್ದು.'

ಕಾಲಕವೃಕ್ಷೀಯನ ಮಾತು ಖಚಿತವಾಗಿತ್ತು. "ಜೀವನೋಪಾಯಕ್ಕೆ ಬೇರಾವ ಮಾರ್ಗವೂ ಕಾಣದೇಹೋದಾಗ, ಕೆಲವು ಭಟ್ಟಂಗಿಗಳು, ದೇಶಭಕ್ತಿ—ರಾಜಭಕ್ತಿಯೆಂಬ ಸೋಗಿನಲ್ಲಿ ನಿಮ್ಮನ್ನಾಶ್ರಯಿಸಿದ್ದಾರೆ. ಅವರಲ್ಲಿ ಒಳ್ಳೆಯವರೂ ಇರಬಹುದು. ದುಷ್ಟರೂ ಇರಬಹುದು. ನಿಮ್ಮ ವಿಶ್ವಾಸಕ್ಕೆ ಪಾತ್ರರಾದ ಆ ಜನ – ಏನುಮಾಡಿದರೂ ಜಯಿಸಿಕೊಳ್ಳಬಹುದೆಂದು ಭಾವಿಸಿದ್ದಾರೆ. ತಾವು ಈ ಬಗೆಯ ಸಿಬ್ಬಂದಿವರ್ಗದ ಬಗ್ಗೆ ಎಚ್ಚರಿಕೆಯಿಂದಿರುವುದು ಸೂಕ್ತವಲ್ಲವೇ? ನನ್ನ ಕಾಗೆ ಸತ್ಯಾಂಶ ಕಂಡಿತ್ತು – ಹೇಳುತ್ತಲೂ ಇತ್ತು. ಬಹುಶಃ ಇದೇ ಅದರ ಸಾವಿಗೆ ಕಾರಣವಾಗಿದ್ದಿರಬಹುದು. ಆಶ್ಚರ್ಯವೇನಿಲ್ಲ. ಅದೇ ಸಾವು ನಾಳೆ ನನಗೂ ಬಂದರೂ ಬರಬಹುದು—ಸೋಜಿಗವೇನಿಲ್ಲ. ಆ ವಿಚಾರಬೇಡ''



ಅಷ್ಟರಲ್ಲಿ ಸಾಮ್ರಾಟರು ಮಾತಾಡಿದರು.

"ಸನ್ಯಾಸಿಗಳೇ — ತಾವು ಹಾಗೆಲ್ಲ ಯೋಚನೆ ಮಾಡಬೇಕಾದ್ದಿಲ್ಲ. ಭಯಪಡಬೇಕಾದ ಪ್ರಮೇಯವೂ ಇಲ್ಲ. ನಿಮ್ಮನ್ನು ರಕ್ಷಿಸಲು ನಾನು ವ್ಯವಸ್ಥೆ ಮಾಡಬಲ್ಲೆ— ಆ ಮಾತು ಹಾಗಿರಲಿ. ತಾವು ನಿರ್ಭಯವಾಗಿ ಮಾತಾಡಿ – ಸ್ಪಷ್ಟವಾಗಿ ಮಾತಾಡಿ.

"ಹಾಗಾದರೆ ಸರಿ ಸಾಮ್ರಾಟ. ಎಲ್ಲಿ ಅಭಯವಿದೆ, ಎಲ್ಲಿ ನಿರ್ಭಯ ವಾತಾವರಣವಿದೆ– ಅಲ್ಲಿ ಮಾತ್ರ ಸತ್ಯ ತಲೆಯೆತ್ತಬಹುದು. ಚಕ್ರವರ್ತಿ—ನಿಮ್ಮ ಬೊಕ್ಕಸ ಭಂಡಾರಗಳನ್ನು ಕೊಳ್ಳೆಹೊಡೆಯುವ ಜನ ನಿಮ್ಮ ಮನೆಯಲ್ಲೇ ಇದ್ದಾರೆ – ನಿಮ್ಮ ಸುತ್ತಲೂ ಇದ್ದಾರೆ. ಅಥವ ನಿಮ್ಮ ಅಧಿಕಾರಿಗಳ ಕೃಪೆಗೆ ಪಾತ್ರರಾಗಿದ್ದಾರೆ. ಅದೇ ಅವರಿಗೆ ರಕ್ಷಾಕವಚವಾಗಿದ್ದರೂ ಆಶ್ಚರ್ಯವಿಲ್ಲ. ಈ ರಕ್ಷಾಕವಚ ತೊಡಿಸುವ ಜನಕ್ಕೆ ಕೊಳ್ಳೆಯಲ್ಲಿ ಒಂದು ಭಾಗ ಸಕ್ರಮವಾಗಿ ಸಂದಾಯವಾಗುತ್ತದೆ. ನಿಮಗೆ ಪರಮಾಪ್ತರಾದ ಅಧಿಕಾರಿಗಳೆಲ್ಲರೂ ಈ ವ್ಯವಹಾರದಲ್ಲಿ ನಿಪುಣರೂ ಹೌದು– ಭಾಗಸ್ಥರೂ ಹೌದು.

''ಇಷ್ಟೆಲ್ಲ ವಿಚಾರವನ್ನು ನಿಮಗೆ ಕಾಗೆ ಹೇಳುತ್ತಿತ್ತೇನು?'' ಸಾಮ್ರಾಟ ಪ್ರಶ್ನಿಸಿದ.

"ಮಹಾ ಪ್ರಭುಗಳು ಮನ್ನಿಸಬೇಕು. ನನ್ನ ಸೂಕ್ಷ್ಮದೃಷ್ಟಿ. ನನ್ನ ಧರ್ಮದೃಷ್ಟಿ– ನನ್ನ ನಿಸ್ಪೃಹ ದೃಷ್ಟಿ ನನಗೆಲ್ಲವನ್ನು ಹೇಳುತ್ತದೆ. ಕಾಗೆಯೊಂದು ನೆಪ-ಅಷ್ಟೆ. ರಾಜ್ಯ ವ್ಯವಹಾರ ಒಂದು ಮಹಾಪ್ರವಾಹ. ಅದರಲ್ಲಿ ಮೀನು ಮೊಸಳೆಗಳಂತಿರಲಿ, ಬೃಹದಾಕಾರದ ತಿಮಿಂಗಿಲಗಳೇ ಇದ್ದಾವು. ಕಾಡು ಮೃಗಗಳೇ ತುಂಬಿರುವಲ್ಲಿ ಸಾಧು ಪ್ರಾಣಿಗಳು ತಲೆಯೆತ್ತುವುದು, ಬಾಳಿ ಬದುಕುವುದು ತುಂಬ ಕಷ್ಟವಾಗುತ್ತದೆ ಮಹಾರಾಜ !! ಈ ಬಗ್ಗೆ ತಾವು ಸೂಕ್ತವಾದ-ಭದ್ರವಾದ ವ್ಯವಸ್ಥೆ ಮಾಡಬೇಕು. ಮತ್ತು ಅದನ್ನು ತುಂಬ ಎಚ್ಚರದಿಂದ–ಎಚ್ಚರಿಕೆಯಿಂದ ಮಾಡಬೇಕು ನನ್ನ ಕಾಗೆ ಸತ್ತಿತಲ್ಲವೇ–ಇದನ್ನೆ ನೆಪವಾಗಿ ಮಾಡಿಕೊಂಡು ಅನುಮಾನಸ್ಪದ ವ್ಯಕ್ತಿಗಳನ್ನೆಲ್ಲ ಕೆಲಸದಿಂದ ತೆಗೆದು ಬಿಡಿ. ಇದು ಹಂತ ಹಂತವಾಗಿ ಆಗಬೇಕಾದ ಕೆಲಸ. ಇಲ್ಲವಾದರೆ ಒಂದೇ ಅಪರಾಧವನ್ನು ಅನೇಕ ಜನರ ಮೇಲೆ ಹೊರಿಸಿದಾಗ ಅವರೆಲ್ಲ ಒಗ್ಗಟ್ಟಾಗುವ ಸಂಭವವಿರುತ್ತದೆ."

"ಮಹಾಶಯರೇ–ನಾನೊಂದು ಪ್ರಶ್ನೆ ಕೇಳಬಹುದೇ? ಚಕ್ರವರ್ತಿ ಗಂಭೀರವಾಗಿ ನುಡಿದ.

"ಮಹಾಪ್ರಭು – ಅದಕ್ಕೆ ನನ್ನಪ್ಪಣೆ ಖಂಡಿತ ಅನಾವಶ್ಯಕ ತಾವು ಏನು ಬೇಕಾದರೂ ಕೇಳಬಹುದು".

"ಹಾಗಾದರೆ–ಹೇಳಿ–ನನ್ನ ಸ್ಥಾನಮಾನಗಳನ್ನು–ಆಸ್ತಿ ಅಂತಸ್ತುಗಳನ್ನು–ಪ್ರಾಣವನ್ನು ರಕ್ಷಿಸುವುದರ ಜತೆಗೆ, ಪ್ರಜಾಕ್ಷೇಮ ಚಿಂತನೆಯಿಂದಲೂ–ನನಗೆ ಸಮಯೋಚಿತವಾದ ಸಲಹೆ ಕೊಡುತ್ತಿರುವ ತಾವು ಯಾರು? ಯಾವದೇಶದವರು?"

"ನಾನು ನಿಮ್ಮ ತಂದೆಯ ಸ್ನೇಹಿತ. ಅಂದಿನಿಂದ ಇಂದಿನವರೆಗೂ ಬದುಕಿದ್ದರೆ ಇನ್ನು ಮುಂದೂ ಸಹ-ನಿಮ್ಮ ಹಿತೈಷಿ ನಾನು ನನ್ನಮಾತು ತಮಗೆ ರುಚಿಸೀತೆಂದು ನಾನು ಭಾವಿಸಬಹುದಷ್ಟೆ? ದೇವರು ನಿಮಗೊಳ್ಳೆಯದನ್ನು ಮಾಡಲಿ"

ಸನ್ಯಾಸಿಯ ಮಾತು ಕೇಳಿ ದೊರೆಯ ಕಣ್ಣಲ್ಲಿ ಪಳಪಳನೆ ನೀರು ಬಂತು ಕಿರೀಟಪತಿ ಕಾವಿಯುಟ್ಟಾತನಿಗೆ ಪಾದ ಮುಟ್ಟಿ ನಮಸ್ಕಾರ ಮಾಡಿದ-ನಿಮ್ಮ ಸಲಹೆ-ಸೂಚನೆಗಳು ಇನ್ನು ಮುಂದೆ ನನಗೆ ಅಪ್ಪಣೆ ಎಂದು ಆತನ ಕೈಹಿಡಿದು ಕೊಂಡು ಹೇಳಿದ.

ಅಂದಿನಿಂದ ಕಾಲಕವೃಕ್ಷೀಯ ಕೋಸಲ ಸಾಮ್ರಾಜ್ಯಕ್ಕೆ ಕ್ಷೇಮಕಾರಿಯಾದ.

# ಯುವವಾಣಿ

# ಮಾತಿನ ಮಹತ್ವ

ಮನುಷ್ಯರು ಆಡುವ ಮಾತುಗಳು ಅಥವಾ ಪದಗಳ ಸಮೂಹಕ್ಕೆ 'ಭಾಷೆ' ಎಂದು ಕರೆಯುವರು. ಭಾಷೆ ಮನಸ್ಸಿನ ವಾಹನ. ಮನಸ್ಸಿಲ್ಲದೆ ಮನುಷ್ಯ ವ್ಯಾಪಾರವಿಲ್ಲ. ಮಾತೆಂಬುದು ಒಬ್ಬ ಮನುಷ್ಯನ ಕಂಠದಿಂದ ಹೊರಟು. ಇನ್ನೊಬ್ಬನ ಕಿವಿಯನ್ನು ಸೇರುವ ಧ್ವನಿ ವಿಶೇಷಗಳ ಒಂದು ನಿಶ್ಚಿತವಾದ ರೂಪ. ಬಹುಕಾಲಗಳಿಂದ ಮಾತುಗಳಿಗೆ ನಡೆದು ಬಂದಿರುವ ಫಲಿತಾಂಶ 'ಭಾಷಾ ಮರ್ಯಾದೆ'.

ಭಾಷೆಯೆಂಬುದು ಜಗತ್ ಸೃಷ್ಟಿಯ ಒಂದು ಶಕ್ತಿ ವಿಶೇಷದ ಸ್ವರೂಪ. ಅದು ಸ್ವಯಂ ವ್ಯಕ್ತವಾದದು. ಅದು ನಿರ್ಬಂಧಕ್ಕೆ ಒಳಪಡದೆ ಸ್ವತಂತ್ರವಾಗಿ ಬೆಳೆಯತಕ್ಕದ್ದು. ಅದರ ರೂಪಗಳು, ರೀತಿಗಳು, ಕಾರ್ಯಗಳು ನಾನಾ ಬಗೆಯವು.

ಮಾತು ಹೇಗಿರಬೇಕು? ಉದ್ಧಟವಾದ ಬಿರುಸು ಮಾತಾಡಬಾರದು, ಪರಿಶುದ್ಧವಾಗಿಯೂ ಅರ್ಥಗರ್ಭಿತವಾಗಿಯೂ ವಿಳಂಬವಿಲ್ಲದೆಯು, ಹೃದಯ ಸ್ಪರ್ಶಿಯು ಆಗಿರಬೇಕು. ಶ್ರೀಮದ್‌ರಾಮಾಯಣದಲ್ಲಿ ಆದಿಕವಿ ವಾಲ್ಮೀಕಿಗಳು ಹನುಮದೇವರ ವಾಣಿಯಲ್ಲಿ ಸ್ಪಷ್ಟಪಡಿಸಿದ್ದಾರೆ–

" ನೂನಂ ವ್ಯಾಕರಣಂ ಕೃತ್ಸ್ನಮ್
ಅನೇನ ಬಹುಧಾ ಶ್ರುತಂ |
ಬಹುವ್ಯಾಹರತಾನೇನ ನ ಕಿಂಚಿತ್
ಅಪಶಬ್ದಿತಂ |
ಅವಿಸ್ತರಂ ಅಸಂದಿಗ್ಧಂ ಅವಿಲಂಬಿತಂ
ಅದ್ರುತಂ |
ಉರಃಸ್ಥಂ ಕಂಠಗಂ ವಾಕ್ಯಂ ವರ್ತತೇ
ಮಧ್ಯಮೇ ಸ್ವರೇ |
ಸಂಸ್ಕಾರ ಕ್ರಮ ಸಂಪನ್ನಾಂ
ಅದ್ರುತಾಮ್ |
... ಉಚ್ಚಾರಯತಿ ಕಲ್ಯಾಣೀಂ
ವಾಚಾಂ ಹೃದಯ ಹಾರಿಣೀಂ ||"

ನೀತಿ, ನೇಮ, ದಾರಿಬಿಟ್ಟು ಆಡಿದ ಮಾತು ಬೇಸರಿಕೆಯನ್ನುಂಟುಮಾಡುವುವು. ಹೊತ್ತಿಗೆ ಒದಗಲಾರದಂತ ಮಾತು ಹತ್ತು ಸಾವಿರ ವಿದ್ದರೂ ವ್ಯರ್ಥವೆ. ಸಮಯೋಚಿತವಾಗಿ ಆಡಿದ ಮಾತು ತುಂಬಾ ಸಂತೋಷವನ್ನುಂಟುಮಾಡುವುದು. ಮಾತು ಒಪ್ಪಿಂತಹವನು ಪ್ರಸಂಗ ಬಂದಾಗ ಸೋತು ಹೋಗುವುದು ಒಳ್ಳೆಯದು. ಆದರೆ ಸಮಯ ಮೀರಿದ ನಂತರ ಆಡಿದ ಮಾತು ಕೈಜಾರಿ ಕೆಳಗೆ ಬಿದ್ದ ಮುತ್ತಿನಂಥಾಗುತ್ತದೆ. ಅದ್ದರಿಂದಲೇ ಮಾತಿನಿಂದ ಎಲ್ಲವೂ ಲಭಿಸುತ್ತದೆ. ಇಲ್ಲಿ ಸರ್ವಜ್ಞ ಕವಿಯ ವಚನವೊಂದನ್ನು ನೆನೆಪುಮಾಡಿಕೊಳ್ಳ ಬಹುದು–

ಮಾತಿನಿಂ ನಗೆನುತಿಯು
ಮಾತಿನಿಂದಲೇ ಹಗೆ ಹತಿಯು |
ಮಾತಿನಿಂ ಸರ್ವ ಸಂಪದವು ಲೋಕಕ್ಕೆ
ಮಾತೇ ಮಾಣಿಕ್ಯವು ಸರ್ವಜ್ಞ ||

ದಿನನಿತ್ಯ ಜೀವನದಲ್ಲಿ ಹಗುರ ಬಾಯಿಬೇಡ, ಹಣ ಚರ್ಚೆ ಬೇಡ, ಕೊಳಕು ಬಣ್ಣದ ಮಾತುಬೇಡ. ಚಾಡಿ, ಹಂಗಿಸುವ ಮಾತು ಬೇಡ, ಗೊಣಗುಟ್ಟುವ ಮಾತು ಬೇಡ, ಮಾತಾಡಿದರೆ ಪೂಜ್ಯ ಬಸವಣ್ಣನವರ ವಾಣಿಯಂತಿರಬೇಕು –

ನುಡಿದರೆ ಮುತ್ತಿನ ಹಾರದಂತಿರಬೇಕು |
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು |
ನುಡಿದರೆ ಸ್ಪಟಿಕದ ಶಲಾಕೆಯಂತಿರಬೇಕು |
ನುಡಿದರೆ ಲಿಂಗವೂ ಮೆಚ್ಚಿ
ಅಹುದಹುದು ಎನಬೇಕು ||

'ಮಾತೇ ಮುತ್ತು, ಮಾತೇ ಮೃತ್ಯು' ಇದೊಂದು ಗಾದೆ ನುಡಿ. ಇಂಥ ನುಡಿಯನ್ನು ಅಳವಡಿಸಿಕೊಂಡು ಇನಿದಾಗಿ ಮಾತಾಡಿದರೆ ಮನಸ್ಸಿಗೆ ಹಿತವಾಗುವುದು. ಇನಿನುಡಿ ಎಂದರೆ ಪ್ರೀತಿಯೊಳಗೊಂಡ ವಂಚನೆಯಿರದ ನಿಜತತ್ತ್ವ ಅರಿತವರ ಬಾಯಿಮಾತು. ನಯವಿಲ್ಲದ್ದನ್ನು ಆಡಿದರೂ, ಫಲವಿಲ್ಲದ್ದನ್ನು ಆಡಬಾರದು. ಹೀಗೆ ತಿಳಿದೂಕೂಡ ಇದೇಕೆ ಕಠಿನವಾಗಿ ಮಾತನಾಡುತ್ತಾರೋ? ಇಂಥವರನ್ನು ಸುಭಾಷಿತ;

'ನ ಜಾನಾತಿ ಶಾಸ್ತ್ರಾರ್ಥಾನ್ ದರ್ವೀ ಪಾಕರಸಾನ್ನಿವ' – ಯಾರು ಶಾಸ್ತ್ರಗಳ ಅರ್ಥ ತಿಳಿಯದೆ ಮಾತಾಡುವವರೋ ಅವರು ಪಕ್ವಾನ್ನಗಳಲ್ಲಿಟ್ಟಿರುವ ಸೌಟಿಗೆ ಸಮ ಎನ್ನುತ್ತದೆ.

ತಪ್ಪನ್ನು ತಿದ್ದುವ ನಯದ ಮಾತಾಗಿದ್ದರೆ ಯಶಸ್ಸು ಲಭ್ಯವಾಗುತ್ತದೆ. ನಮ್ಮನ್ನು ಒಪ್ಪದ ಮುಂದಿ ಆಕ್ಷೇಪಿಸಿ ಆಲೋಚನೆ ಗೀಡು ಮಾಡುತ್ತಾರೆ. ಇದರಿಂದ ನಾವು ಬೇಕಾದಷ್ಟು ಕಲಿಯುತ್ತೇವೆ... ಅಲ್ಲವೇ? ಇಲ್ಲಿ ಪುರಂದರದಾಸರ ಕೀರ್ತನೆಗಳನ್ನು ಸ್ಮರಿಸಬಹುದು. ದಾಸರು ಬೈಯ್ಯುವವರನ್ನು, ನಿಂದಕರನ್ನು ಸ್ವಾಗತಿಸಿದ್ದಾರೆ–

ಬೈಯಿರೋ ಬೈಯಿರೋ
ಮನಮುಟ್ಟಿ ಬೈಯಿರೋ
ಚೆನ್ನಾಗಿ ಬೈದೆನ್ನ ಧನ್ಯನ ಮಾಡಿರೋ
.....................
ನಾ ಮಾಡಿದ ಪಾಪವನು ಅಳೆದು ಹಾಕಿ
ಹಂಚಿಕೊಳ್ಳಿರೋ

* * * *

ನಿಂದಕರಿರಬೇಕು
ಹಂದಿಯಿದ್ದರೆ, ಕೇರಿಹ್ಯಾಂಗೆ ಶುದ್ಧಿಯೋ
ಹಾಂಗೆ

* * * *

ಬದುಕು ಭಾರವೆನಿಸುವುದಿಲ್ಲ ಯಾರಿಗೆ? ಡಾ || ಡಿ. ವಿ. ಗುಂಡಪ್ಪನವರು ಹೀಗೆ ಉತ್ತರಿಸುವರು–

.....................
ಹಸನೊಂದು ನುಡಿಯಲ್ಲಿ, ನಡೆಯಲ್ಲಿ,
ನೋಟದಲಿ

**ಮತ್ತೀಗೆರೆ ಅನಂತು**

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಪಸರುತಿರೆ ಬಾಳ್ ಚೆಲುವು

– ಮಂಕುತಿಮ್ಮ

ಶಾರೀರಕ ಅಲಂಕಾರಗಳು ಕ್ರಮೇಣ ನಾಶ ಹೊಂದುತ್ತವೆ. ಸತ್ಯ, ವಿನಯ, ಪ್ರಿಯ ವಚನಗಳೇ ನಿಜವಾದ ಅಲಂಕಾರ.

ನಮ್ಮ ಜೀವನದಲ್ಲಿ ಮಾತಿನಷ್ಟು ಸುಲಭ ಯಾವುದು ಇಲ್ಲ. ಇಡೀದಿನ ಬಹುಪಾಲು ಮಾತೆಲ್ಲ ವ್ಯರ್ಥವಾಗುತ್ತದೆ. ಆ ಮಾತುಗಳನ್ನೇ ತಪಸ್ಸಿಗೆ ಪರಿವರ್ತಿಸಬಹುದು. ಮಾತನ್ನು ತಪಸ್ಸಿಗೆ ಪರಿವರ್ತಿಸಬೇಕಾದರೆ ಮಾತಿನಲ್ಲಿ ಉದ್ವೇಗ, ಕೋಪ ಮಾತ್ಸರ್ಯ ಇರಬಾರದು, ಭಗವದ್ಗೀತೆಯ ಶ್ಲೋಕವೊಂದನ್ನು ಸ್ಮರಿಸ ಬಹುದು –

ಅನುದ್ವೇಗಕರಂ ವಾಕ್ಯಂ
ಸತ್ಯಂಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ
ವಾಙ್ಮಯಂ ತಪ ಉಚ್ಯತೇ ॥

ಮಾತನ್ನು ಸತ್ಯವಾಗಿ ಹೇಳಬೇಕು. ಅಪ್ರಿಯವಾಗಿದ್ದರೆ ಹೇಳಲೇ ಬೇಡ, ಇದರಿಂದ ಒಳ್ಳೆಯದಾಗುವ ಬದಲು ಕೆಡುಕಾಗುವ ಸಂಭವವೇ ಹೆಚ್ಚು. ಇಲ್ಲಿ ಉದಾಹರಣೆಯೊಂದನ್ನು ಅವಲೋಕಿಸಬಹುದು.

ಒಮ್ಮೆ ರಾಜನೊಬ್ಬನಿಗೆ ಜ್ಯೋತಿಷಿಯೊಬ್ಬ 'ಮಹಾಸ್ವಾಮಿ ನಿಮ್ಮ ಎದುರಿನಲ್ಲೇ ನಿಮ್ಮ ಮಡದಿ ಮಕ್ಕಳು ಕೆಲವೇ ದಿನಗಳಲ್ಲಿ ಸಾಯುವರು' ಎಂದು ತಿಳಿಸಿದನಂತೆ. ಆಗ ರಾಜ ಅವರನ್ನು ಉದಾಸೀನ ಭಾವದಿಂದ ಕಳುಹಿಸಿ ಕೊಟ್ಟು, ಬೇರೊಬ್ಬ ಜ್ಯೋತಿಷಿಯನ್ನು ಕರೆಸಿ ಭವಿಷ್ಯ ಕೇಳಿದಾಗ ಆತ "ರಾಜನ್ ನಿಮಗೆ ನಿಮ್ಮ ಕುಟುಂಬದವರೆಲ್ಲರಿಗಿಂತ ದೀರ್ಘಾಯುಸ್ಸು" ಎಂದಾಗ ರಾಜ ಸಂತೋಷಗೊಂಡು ಅವರನ್ನು ಸನ್ಮಾನಿಸಿದನಂತೆ. ಈ ಸಂದರ್ಭದಲ್ಲಿ ಉಪನಿಷತ್‌ವಾಣಿಯೊಂದನ್ನು ಉದ್ಧರಿಸಬಹುದು.

'ಸತ್ಯಂ ಬ್ರೂಯಾತ್ ಪ್ರಿಯಂ
ಬ್ರೂಯಾತ್
ನ ಬ್ರೂಯಾತ್ ಸತ್ಯಮಪ್ರಿಯಂ'

ಮಾತಾಡುವುದು ಕೂಡ ಜ್ಞಾನದ ಒಂದು ಅಂಗ. ಮಾತಿನ ಒಡತನವು ಮಾನವನಿಗೆ·

ಮನಸ್ಸಿನ ದಾರಿದ್ರ್ಯದ ಚಿಹ್ನೆ. ಮಾತು ಮನ್ನಣೆಗೆ ಮಹಾಸಾಧನವೂ ಹೌದು. ಮಾತಾಡಿದರೆ ಫಲವುಳ್ಳ ಮಾತಾಡಬೇಕು. 'ತಿರುಕ್ಕುರಳ್' ನಿಂದ ಪದ್ಯವೊಂದನ್ನು ಇಲ್ಲಿ ಸ್ಮರಿಸಬಹುದು –

"ಶೊಲ್ಲುಗ ಶೊಲ್ಲಿಲ್ ಪಯನುಡೈಯ
ಶೊಲ್ಲರ್ಕ
ಶೊಲ್ಲಿಲ್ ಪಯನಿಲಾಚ್ಚೊಲ್"

ಅಪ್ರಿಯವಾದರೂ ಪಥ್ಯವಾದ ಹಿತ ಮಾತೊಂದನ್ನು ಹೇಳುವವನೂ, ಕೇಳುವವನೂ ಸಿಗುವುದು ಅಪರೂಪ. ಈ ಮಾತನ್ನು ಹೇಳಿದವನು ಮಾರೀಚ ರಾವಣನಿಗೆ–

ಸುಲಭಾಃ ಪುರುಷಾ ರಾಜನ್
ಸತತಂಪ್ರಿಯವಾದಿನಃ ।
ಅಪ್ರಿಯಸ್ಯ ಚ ಪಥ್ಯಸ್ಯ
ವಕ್ತಾ ಶ್ರೋತಾ ಚ ದುರ್ಲಭಃ ॥

ಸೀತಾಪಹರಣವನ್ನು ಮಾಡಬೇಡ ಎಂಬ ಮಾರೀಚನ ಮಾತು ರಾವಣನಿಗೆ ಅಪ್ರಿಯವಾದರೂ ಪಥ್ಯವಾಗಿತ್ತು, ಆದರೆ ಅದನ್ನು ಕೇಳಿದವರಾರು?

ನಕ್ಕು ನಗಿಸುವ ನುಡಿಲೇಸು, ಮಾತು ರಸಿಕತನದಿಂದ ಕೂಡಿರಬೇಕು. ರಸಿಕತನವಿಲ್ಲದವನ ಮಾತು ಕಿವಿಯಲ್ಲಿ ಚೂಪಾದ ಗೂಟ ಬಡಿದಂತಾಗುತ್ತದೆ ಎನ್ನುತ್ತಾನೆ ಸರ್ವಜ್ಞ–

'ರಸಿಕನಾಡಿದ ಮಾತು ಶಶಿಯುದಿಸಿ
ಬಂದಂತೆ ।
ರಸಿಕತನವಿಲ್ಲದನ ಬರಿಮಾತು ಕಿವಿಯಲ್ಲಿ
ಕೂರ್ದಶಿಯು ಬಡಿದಂತೆ ... ... "

ಇನ್ನು ಮಾತಿನ ಮಹತ್ವವನ್ನು ತಿಳಿಯೋಣ; 'ಋಗ್ವೇದ ಸಂಹಿತೆ'ಯ ಮಂತ್ರವೊಂದನ್ನು ಅವಲೋಕಿಸಬಹುದು–

ಸಕ್ತುಮಿವ ತಿತಉನಾ ಪುನನ್ತೋ ।
ಯತ್ರ ಧೀರಾ ಮನಸಾ ವಾಚಮಕ್ರತ ॥
ಅತ್ರಾಸಖಾಯಃ ಸಖ್ಯಾನಿ ಜಾನತೇ ।
ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿವಾಚಿ ॥

ಹಿಟ್ಟನ್ನು ಜರಡಿಯಾಡಿ ಶೋಧಿಪರು, ಇವರಂತೆ ಧೀರರು ಮನದಲ್ಲಿ ಮಾತನ್ನು ಶೋಧಿಸುವರು, ಮತ್ತು ಅಲ್ಲಿ ಗೆಳೆಯರು ನಿಜವಾಗಿಯೂ ಗೆಳೆತನವ ಕಾಣುವರು. ಇಂಥಹ ವಾಕ್ಕಿನಲ್ಲಿ ಲಕ್ಷ್ಮಿಯು ಮಂಗಳವು ಕೂಡಿರುವವು.

ಮಹಾಕವಿ ಕಾಳಿದಾಸನ ನುಡಿಯಲ್ಲಿ 'ಮಾತೆಂಬುದು ಜ್ಯೋತಿರ್ಲಿಂಗ', 'ಸ್ವರವೆಂಬುದು ಪರತತ್ತ್ವ' ಎಂಬ ಮಹಿಮೆಯೇ ಅಡಗಿದೆ–

" ವಾಗರ್ಥಾವಿವ ಸಂಪೃಕ್ತೌ
ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ
ಪಾರ್ವತೀಪರಮೇಶ್ವರೌ "

ಸ್ವಾಮಿ ವಿವೇಕಾನಂದರ ಒಂದೇ ಒಂದು ಮಾತು, ಚಿಕಾಗೋದಲ್ಲಿ ಬಹಳ ಮನ್ನಣೆಗಳಿಸಿತು. ಆ ಮಾತು "ನನ್ನ ಅಮೆರಿಕಾದ ಸಹೋದರ ಸಹೋದರಿಯರೆ" ಈ ನುಡಿಯಲ್ಲಿ ನಮ್ಮ ಭಾರತೀಯ ಸಂಸ್ಕೃತಿಯೇ ಅಡಗಿದೆಯಲ್ಲವೇ?

ಶಾರ್ಙ್ಗಧರ ವಿರಚಿತ ಶ್ಲೋಕವೊಂದರಲ್ಲಿ ಮಾತಿನ ಬಗ್ಗೆ ಹೇಳಿರುವ ಮಹತ್ವ ಗಮನಾರ್ಹವಾದದು–

ಲಕ್ಷ್ಮೀರ್ವಸತಿ ಜಿಹ್ವಾಗ್ರೇ
ಜಿಹ್ವಾಗ್ರೇ ಮಿತ್ರ ಬಾಂಧವಾಃ ।
ಜಿಹ್ವಾಗ್ರೇ ಬಂಧನಂ ಪ್ರಾಪ್ತಂ
ಜಿಹ್ವಾಗ್ರೇ ಮರಣಂ ಧ್ರುವಂ ॥

ಮಾತಿನಿಂದಲೇ ಸಂಪತ್ತು, ಮಿತ್ರ ಬಾಂಧವರು ಒದಗುತ್ತಾರೆ. ಮಾತಿನಿಂದಲೇ ಮರಣವೂ ಬಂಧನವೂ ಉಂಟಾಗುತ್ತದೆ.

ನಾವು ಯಾವಾಗಲೂ ಒಳ್ಳೆಯ ಮಾತಾಡುವುದನ್ನು ಅಭ್ಯಾಸಮಾಡಿಕೊಳ್ಳಬೇಕು. ಇದರಿಂದ ಇತರರಿಗೂ ಸಂತೋಷವಾಗಿ ನಮಗೂ ಸಂತೋಷವಾಗುವುದು.

ಪ್ರಿಯವಾಕ್ಯ ಪ್ರದಾನೇನ
ಸರ್ವೇ ತುಷ್ಯನ್ತಿ ಜಂತವಃ ।
ತಸ್ಮಾತ್ತದೇವ ವಕ್ತವ್ಯಂ
ವಚನೇ ಕಾ ದರಿದ್ರತಾ ॥
( ಚಾಣಕ್ಯನೀತಿಯಿಂದ )

ಒಳ್ಳೆಯ ಮಾತಿನಿಂದ ಯಾವ ಪ್ರಾಣಿಗೂ ಹರುಷ ಬರುವುದು. ಆದುದರಿಂದ ಅದನ್ನೇ ನುಡಿಯಬೇಕು. ಇಂತಹ ಮಾತಿಗೇಕೆ ನಮ್ಮಲ್ಲಿ ಬಡತನ? ★

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಆಡಳಿತ ನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

(11ನೇ ಪುಟದಿಂದ)

ರಿಂದ ಅದು ಅವನ ಶರೀರಕ್ಕೇ ಸಂಬಂಧಪಟ್ಟವು. ಆದುದರಿಂದಲೇ ಅವುಗಳು ಅವನ ಜ್ಞಾಪಕವನ್ನುಂಟುಮಾಡುವುವು. ಬಾನಿನ ನಕ್ಷತ್ರಗಳು ಅವನ ಕಣ್ಣಿನ ಕಾಂತಿಯನ್ನು ಪ್ರಶಾಂತವಾದ ನದಿಗಳು ಅವನ ಗಾಂಭೀರ್ಯವನ್ನೂ ಹೂವುಗಳ ಪರಿಮಳವು ಅವನ ಶರೀರ ಕಾಂತಿಯನ್ನು ನೆನಪಿಗೆ ತರುವುವು. ಭಗವಂತನ ಸೌಂದರ್ಯಾನುಭವವೇ ಈ ರೀತಿಯಾದ ಚಿತ್ರಗಳಿಗೆ ಕಾರಣ. ಆದುದರಿಂದಲೇ ಇವರ ಕೃತಿಗಳು ಅತ್ಯುತ್ತಮವಾದ ಪ್ರಕೃತಿ ವರ್ಣನೆಗಳಿಂದ ತುಂಬಿರುವುವು. ಆದರೆ ಇವುಗಳ ಉದ್ದೇಶ ಮಾತ್ರ ಐಹಿಕವಲ್ಲ. ಆಮುಷ್ಮಿಕಕ್ಕೆ ಸಂಬಂಧಪಟ್ಟವು. ಇವರ ಪ್ರಕೃತಿ ವರ್ಣನೆಯ ಮೇಲ್ಮೆಯನ್ನು ಇವರು ಚಿತ್ರಿಸಿರುವ 'ತಿರುವಲ್ಲವಾಳ್' ಮತ್ತು 'ತಿರುಮಾಲಿರುಂಶೋಲೈ' ಎಂಬ ದಿವ್ಯದೇಶಗಳ ವರ್ಣನಾತ್ಮಕವಾದ ಈ ಕೆಳಗಿನ ಪದ್ಯಗಳಲ್ಲಿ ಕಾಣಬಹುದು.

## ತಿರುವಲ್ಲವಾಳ್

ಎರಳೆ ಕಣ್ಣ ಗೆಳತಿಯರ! ಅನುದಿನವು
ನಶಿಸುತಿರ್ಹೆ
ಬಾನುದ್ದದಡಿಕೆಮರ ಕಂಪಿಡಿದ ಮಲ್ಲಿಗೆಯು
ದುಂಬಿಗಳು ತುಂಬಿರುವ ತೋಪಿನಂ
ಮರೆಯುತಿಹ
ತಿರುವಲ್ಲವಾಳೆರೆಯನಡಿಸಾರ್ವುದಾನೆಂದೊ ?

ಸಖಿಯರಿರ ನೀವೆನ್ನ ತಡೆವುದುಚಿತವೆ ಪೇಳಿಂ
ಪೊನ್ನಿನೀರದ ಪುನ್ನಾಗ ವಕುಳ ನವಮಾಧವಿಯ
ಮೇಲ್ಸುಳಿದ ತಣ್ಣೆಲರ ನರುಗಂಪು ಸುಳಿಯುತಿಹ
ತಿರುವಲ್ಲವಾಳೆರೆಯನಡಿಸಾರ್ವುದಾನೆಂದೊ ?

ಹೂಮುಡಿದ ಒಡತಿಯರಾ! ವಿರಹದಿಂ
ಸವೆವಾನು
ಕಡಲುಲಿಯನನುಕರಿಸಿ ಘೋಷಿಸಲು
ವೇದಗಳ
ಬಾನುದ್ದ ಬೆಳೆದಿರುವ ಧೂಮಗಂಧವತಳೆದ
ತಿರುವಲ್ಲವಾಳೆರೆಯನಡಿಗಳನು ಕಾಣುವೆನೆ ?

ಗೆಳತಿಯರ! ನೀವೆನ್ನ ತಡೆದು ಮಾಡುವುದೇನು?
ಹಸುರೆಲೆಯ ನೀಡಡಿಕೆ ಫಲತರದ ಚೆಂದೆಂಗು
ಪನಸು ಬಾಳೆಗಳಡಿಯೆ ಮೆರೆಯುತಿಹ
ಮಾಡಗಳ
ತಿರುವಲ್ಲವಾಳೆರೆಯನಾ ನಮ್ಮ ಆಶ್ರಯವು

ಆಡುತಿಹ ಇನಿಗಬ್ಬು, ಮಿಗೆ ಬೆಳದ ಚೆಂಬತ್ತ
ಎಲ್ಲೆಡೆಗೆ ಕಂಪೀವ ಪೂವಿಡಿದ ಆರತಿಯು
ಬಳಸಿರುವ ತಿರುವಲ್ಲವಾಳೆರೆಯನಡಿಗಳನು
ಬಿಡದೆ ನಾಸಾರ್ದೆಂದು ಪೂಜಿಸುವೆ ಗೆಳತಿ

## ತಿರುಮಾಲಿರುಂ ಶೋಲೈ

ನುಣ್ಪೂಗರ ಯುವ್ವನವು ಜಾರಲ್ಕೆ ಮುನ್ನ
ಹೆಚ್ಚುತಿಹ ಕಾಂತಿಯಾ ಮಾಯಾವಿ
ನೆಲಸಿರುವ
ತರುಗಿಡಗಳಿಂ ತುಂಬಿ ವಿಭವದಿಂ ಮೆರೆಯುತಿಹ
ಮಾಲಿರುಂ ಶೋಲೆಯುಂ ಹೊಂದುವುದೆ
ಜಾಣ್ಮೆ

ಚತುರರಹ ಮಡದಿಯರ ಮೋಹವನು
ಲೆಕ್ಕಿಸದೆ
ಇನಿಗೊರಲ ಶಂಖದಾ ಚೆಲ್ವರಳೆ ನಿಂತಿರ್ಪ
ತಣ್‍ಕದಿರನಾಡುತಿಹ ಶಿಖರದಿಂ ಬೆಳಗುತಿಹ
ಮಾಲಿರುಂಶೋಲೆಯುಂ ಪಾಡುವುವೇ ಪೆರ್ಮೆ

ಅಳಿಗೆಯ್ಮೆ ಗೆಯ್ಯುವುದು ಗೆಯ್ಮೆಯಲ್ಲಿವೆ
ಮನಸೆ !
ಕಾರ್ಮುಗಿಲ ಬಣ್ಣದಾ ಸಿರಿಯರಸ ತಾನಾಳ್ದ
ಸಿರಿವನದಿ ಬಳಸಿರುವ ಮಾಲಿರುಂಶೋಲೆಯಾ
ಬಳಿಯೊಳಿಹ ಬೆಟ್ಟವನು ಹೊಂದುವುದೆ ಹೆಮ್ಮೆ

ಜನರು ಜೀವಿಸುವಂತೆ ಕರ್ಮಪಾಶವೇ ಹರಿದು
ಪೆರ್ಮಲೆಯನೆತ್ತಿದಾ ಮಹಿಮ ತಾ ವಾಸಿಸುವ
ಕಾರ್ಮುಗಿಲನನುದಿನವು ಬೆಡಗಿನಿಂ
ಚುಂಬಿಸುವ
ಮಾಲಿರುಂ ಶೋಲೆಯನು ಸೇರುವುದೆ ಮೇಲ್ಮೆ

ಏತೆರದ ಬಲಗಳಿಂ ತೀವಿನೆಯ ಹರಡಿಸದೆ
ಧರ್ಮದಾ ಚಕ್ರವನು ಧರಿಸಿದವ ನೆಲಸಿರ್ಪ
ತಿಳಿನೀರ ಪೆರ್ದೊರೆಗಳ್ ಸುತ್ತಿ ಬಳಸಿರುವ
ಪರ್ವತದ ಬಳಿಮಲೆಯ ಸಾರ್ವುದೆ ಪುಣ್ಮೆ

ಉರಿಯ ಬೆಣ್ಣೆಯನುಂಡ ಶ್ರೀಕೃಷ್ಣ ತಾನಿರ್ಪ
ಜಿಂಕೆಗಳು ಮರಿಗೂಡಿ ನಲಿಯುತಿಹ
ಶೋಲೆಯಾ
ಬೆಟ್ಟವನು ಸೇರಬೇಕೆಂದೆಂಬ ನೆನಹದುವೆ
ನಲ್ಮೆಯೆಂದರಿಯುವುದು ಕೀಳ್ಮನದಿ ಚಿಂತಿಸದೆ

ಪ್ರಬಲತರಪಾಪದೊಳು ಮುಳುಗದೇ ಎಚ್ಚರದಿ
ಯುಕ್ತವೆಂದರಿವುದಿದ, ರಕ್ಕಸಿಯ ಕೊಂದವನ
ದೇಗುಲದ ಬಳಿಸಾರ್ದ ಕರಿಣಿಗಳ ತಂಡದಿಂ
ಮೆರೆಯುತಿಹ ಶೋಲೆಯನು ಸೇರುವುದೆ
ಅಳ್ತಿಯೆಂದು

ಮೇಲಿನ ಪದ್ಯಗಳಲ್ಲಿ ಆಳ್ವಾರ್ರವರು ಪ್ರಕೃತಿಯ ವೈಚಿತ್ರ್ಯವನ್ನು ಸಸ್ಯಸಮೃದ್ಧಿಯನ್ನು ಸ್ವತಂತ್ರವಾಗಿ ಅಲೆದಾಡುವ ಪ್ರಾಣಿವರ್ಗವನ್ನೂ ಎಷ್ಟು ಸರಳವಾಗಿಯೂ ಲಲಿತವಾಗಿಯೂ ವರ್ಣಿಸಿದ್ದಾರೆಂಬುದನ್ನು ಮನಗಾಣಬಹುದು.

ಮುಂದಿನ ಕೆಲವು ಗೀತಗಳು ಆಳ್ವಾರ್ರವರ ಸಿದ್ಧಾಂತವನ್ನು ವಿಶದಪಡಿಸುವುವು ಭಗವಂತನು ಸಾಕಾರಿಯೂ ಅಹುದು, ನಿ ರಾ ಕಾ ರಿ ಯೂ ಅಹುದು; ಅವನು ಅಸಂಖ್ಯೇಯು, ಅನುಪಮ, ಲೋಕಾತಿರೇಕಿ. ಅವನೇ ಕವಿಯ ಒಡಲು; ಜೀವದುಸಿರು, ಅವನು ಎಲ್ಲ ವಸ್ತುಗಳಲ್ಲಿಯೂ ಸಂಬಂಧಿಸಿ ಸೂಕ್ಷ್ಮ ಅಣುವಾಗಿ ಸೇರಿರುತ್ತಾನೆ. ಪ್ರಪಂಚದ ಬೇರೆಬೇರೆಯ ವಸ್ತುಗಳು ಯಾವ ಯಾವ ಉದ್ದೇಶಕ್ಕಾಗಿ ಸೃಷ್ಟವಾಗಿವೆಯೋ ಆ ಉದ್ದೇಶಸಾಧನೆಯಾಗುವ ಹಾಗೆ ಅವುಗಳನ್ನು ಏರ್ಪಡಿಸಲೂ ಮತ್ತು ಮಾರ್ಪಡಿಸಲೂ ಆತನೊಬ್ಬನಿಗೇ ಸಾಧ್ಯ. ಮುಂದಿನ ಪದ್ಯವನ್ನು ನೋಡಿ :—

ಎನ್ನೊಡಲು ಉಸಿರಂತೆ, ಅಂಡಗಳ
ಒಳ ಹೊರಗು
ಹಾಗೆಂದು ಹೀಗೆಂದು ಬಣ್ಣಿಸಲಾಗದವನ್
ಇನಿಗಂಪಿನೊಳಗಿರುವ ಸೂಕ್ಷ್ಮ
ಅಣುವಾಗಿಹನ್
ದುಃಖವನು ಕಾಣದಿಹ ಜ್ಞಾನನಿಧಿ,
ಪರಾತ್ಪರನ್

ಭಗವಂತನ ಅಪಾರಗುಣಗಳಲ್ಲಿ ಭಕ್ತನ ದೃಷ್ಟಿಯಿಂದ ಮುಖ್ಯವಾದುದು ಅವನ ಕೃಪಾಗುಣ. ಭಕ್ತನ ಆಸೆಯನ್ನು ತಿಳಿದ ತಕ್ಷಣವೇ ಭಗವಂತನು ಅವನಿಗೆ ತಿಳಿಯದೆಯೇ ಬಂದು ಅವನನ್ನು ಸ್ವೀಕರಿಸುವನು.

ಎನ್ನ ನೀ ಚೆಲ್ವಪ್ಪ ಪೊನ್ನಡಿಯ ಕೆಳಗಿರಿಸು
ಎಂದೆನುತ ಪಲಕಾಲ ನಾ ಬೇಡಿ ಅಳುತಿರಲು
ಪ್ರೀತಿಯಿಂ ವಾಮನನು ತಾನ್ ಪೊಕ್ಕು
ಎನ್ ಮನವ
ಅದರೊಡನೆ ತಾ ಸೇರಿ ನೆಲೆಯಾಗಿ
ನಿಂತಿಹನ್

ಪ್ರಪಂಚದಲ್ಲಿ ಭಗವಂತನೊಬ್ಬನು ವಿನಾ ಉಳಿದುವೆಲ್ಲ ಅಸ್ಥಿರವಾದವು. ನಿಜವಾಗಿ ಪ್ರಾಪ್ಯನಾದವನವನೊಬ್ಬನೇ. ಈ ವಿಷಯವನ್ನು ಆಳ್ವಾರು ಮುಂದಿನ ಪದ್ಯಗಳಲ್ಲಿ ಬಹುಹೃದಯಂಗಮವಾಗಿ ವರ್ಣಿಸಿದ್ದಾರೆ.

ಒಂದೆ ಕೊಡೆಯ ನೆರಳಿನಲ್ಲಿ ಲೋಕವನ್ನೆ
ಆಳಿದವರು
ಕರಿಯನಾಯಿ ಕಚ್ಚಿ ಕಾಲ ಒಡೆದ
ಮಡಕೆಯನ್ನು ಹಿಡಿದು
ಲೋಕವೆಲ್ಲ ಕಾಣುವಂತೆ ಅಂತೆ ಭಿಕ್ಷೆ
ಬೇಡುವುದರಿಂ
ನಾರಾಯಣ ಪಾದವನ್ನು ಬಿಡದೆ ತುತಿಸಿ
ಬಾಳ್ವುದು

'ಕಪ್ಪವನ್ನು ತಂದು ಕೊಟ್ಟು ಬಾಳಿ' ಎಂದ
ರಾಜರಂತೆ

ತಮ್ಮ ಪ್ರಿಯರ ಪರರು ಕೊಳ್ಳೆ ತಾ ಬಿಟ್ಟು,
ಬೇಗೆಯಿಂದ
ಬೆಂದು ಕಾಡಿನಲ್ಲಿ ಪೋಗಿ ಪೀಡೆಯನ್ನು
ತಿನ್ನುವುದರಿಂ
ಚೆಲ್ವುಮುಡಿಯ ನಾರಾಯಣನನಾಳಿಗೊಂಡು
ಬಾಳ್ವುದು

ಅಡಿಯ ಕೆಳಗೆ ಮುಡಿಯನಿಟ್ಟು ರಾಜಗಣವು
ಸೇವೆಗೆಯ್ಯೆ
ಸಿಡಿಲ ನರಿಯ ಮುರಜ ಹೊರಗೆ ದನಿಯಗೆಯ್ಯೆ
ಮೆರೆದ ರಾಜರ್
ಕಾಲ ಅಡಿಯ ಧೂಳಿ ಆಗಿ ಪೋಪರದರಿಂ
ತ್ವರಿತದಿಂದ
ತುಳಸಿಮಾಲೆಯಿಂದ ಮೆರೆವ ಕೃಷ್ಣನಡಿಯ
ನೆನೆದು ಬಾಳ್ವುದು

ಲೋಕತತ್ತ್ವ ತನ್ನ ನೆನೆಯೆ ಎಂತೊ
ಕಾಲಮಾಳಿ ಕಳೆದ

ರಾಜಸಂಖ್ಯೆ ಕಡಲ ಮಳಲರಾಶಿಯಂತೆ
ಗಣನೆಯಿಲ್ಲದಾದುದು
ಅವರು ಸಮೆದ ಮಾಡವೆಲ್ಲ ಪಾಳುಭೂಮಿ
ಯಾಯಿತದರಿಂ
ಮತ್ತಗಜವನಾಳವ ಕಣ್ಣನಡಿಯ ನೆನೆದು
ಬಾಳ್ವುದು

ಬಾಳ್ವೆಂದು ಹಿಗ್ಗುವವರ ಸಿರಿಯು ಕೂಡ
ಪಿರಿಯ ಮಳೆಯ
ಗುಳ್ಳೆಯಂತೆ ನಶಿಸಿನಶಿಸಿ ಮಾಯವಾಗಿ
ಪೋಗುತಿಹುದು
ಬಾಳಿದವರು ಬಾಳ್ದ ಬಾಳ್ವೆ ಎಂಬ
ತತ್ತ್ವ ವಿಲ್ಲದುದರಿಂ
ಪಿರಿಯ ಕಡಲ ಸಜ್ಜೆಯವನ ಅಡಿಯಸಾರ್ದು
ಬಾಳ್ವುದು

ಮಾನವನಿರುವುದು ಸ್ವಂತ ಉಪಯೋಗಕ್ಕಲ್ಲ. ಭಗವಂತನ ಇಚ್ಛಾನುಸಾರ ಅವನ ಸೇವೆಮಾಡು

ವುದಕ್ಕೆ. ಈ ಭಕ್ತಿಗೆ ಯಾವ ಪ್ರತಿಫಲಾಪೇಕ್ಷೆಯೂ ಇರಕೂಡದು. ಆದರೂ ನಿತ್ಯ ಕೈಂಕರ್ಯ ಪ್ರಾಪ್ತಿಯ ಭಕ್ತನು ಪ್ರಾರ್ಥಿಸದಿದ್ದರೂ ಸದ್ಭಕ್ತಿಯ ಫಲವಾಗಿ ಬಂದೇ ಬರುವುದು. ಮೋಕ್ಷವೆಂದರೂ ಅದೇ ಅರ್ಥ. ಅದು ಜಡವಾದ ಸರ್ವಸಂಗತ್ಯಾಗವಲ್ಲ. ಭಗವಂತನ ಉದ್ದೇಶವನ್ನು ಆತನ ನಿಯಮವನ್ನು ನಡೆಸುವುದಕ್ಕೆ ಸಹಾಯವಾಗುವುದೇ ಮೋಕ್ಷ. ಜ್ಞಾನ, ಭಕ್ತಿ, ಪ್ರಪತ್ತಿಗಳಿಂದ ಎಲ್ಲ ಜೀವಿಗಳೂ ಈ ಮೋಕ್ಷವನ್ನೂ ಇಲ್ಲಿಯೇ ಪಡೆಯಬಹುದು. ಇದಕ್ಕೆ ಯೋಗ್ಯವಾಗುವಂತೆ ಮನೋವಾಕ್ಕಾಯಗಳನ್ನು ಅನುಗೊಳಿಸಬೇಕೆಂಬುದೇ ಆಳ್ವಾರವರ ಅನವರತ ಪ್ರಾರ್ಥನೆ.

ಪಿರಿದಪ್ಪ ಮೋಕ್ಷವನು ನಾನು ಬೇಡುವುದಿಲ್ಲ –
ಇನಿದಪ್ಪ ನಿನ್ನಡಿಗಳ್ ತಲೆಯ ಮೇಲಿರಲಿ
ಅದಕಾಗಿ ಬೇಡುವುದು ನಿನ್ನೆಡೆಯ, ಬೇರೆಯೊಂ
ದಿನಿತಿಲ್ಲ ಗಜರಾಜಗೊಲಿದೆನ್ನ ಸಿರಿವರನೆ

ಬಾಳಿನಾ ಕಡೆಯಲ್ಲಿ ಇನಿದಪ್ಪ ಮೋಕ್ಷವೂ
ಸ್ವರ್ಗನರಕಗಳೆರಡು ಬರಲಿ ಬಾರದೆ ಇರಲಿ
ಸಾವುಪುಟ್ಟಗಳಿರದೆ ಪಲಸಾರಿ ಪುಟ್ಟದನೆ
ಒಂದಿನಿತು ಮರೆಯದೆಯೆ ದುಡಿಯ
ಬೇಕೆಂಬಾಸೆ

ಆಳ್ವಾರವರು ಭಗವಂತನ ಅರ್ಚಾಮೂರ್ತಿಗಳಾದ ದಿವ್ಯದೇಶಗಳ ದೇವರನ್ನು ವಿಶೇಷವಾಗಿ ವರ್ಣಿಸಿದ್ದಾರೆ. ದಕ್ಷಿಣಭಾರತದ ಚೋಳ, ಪಾಂಡ್ಯ ಮಲೆಯಾಳ ದೇಶದ ಸುಮಾರು ಮೂವತ್ತು ಮೂರ್ತಿಗಳನ್ನೂ ಉತ್ತರದೇಶದ ಅಯೋಧ್ಯೆ ಮತ್ತು ದ್ವಾರಕೆಗಳಲ್ಲಿರುವ ಮೂರ್ತಿಗಳನ್ನು ಬಹುಮನೋಹರವಾಗಿ ವರ್ಣಿಸಿದ್ದಾರೆ. ಪ್ರಕೃತಿ ಸಾಮಾನ್ಯದಲ್ಲಿ ಭಗವಂತನನ್ನು ಕಾಣುತ್ತಿದ್ದ ಆಳ್ವಾರರಿಗೆ ಈ ಸುಂದರ ವಿಗ್ರಹಗಳನ್ನು ಕಂಡಾಗ ಸ್ವಾಮಿಯ ಸಾಕ್ಷಾದ್ದರ್ಶನವಾದಂತೆಯೇ ಭಾಸವಾಗುತ್ತಿತ್ತು. ಇವುಗಳು ಅವನ ಬೇರೆ ಬೇರೆ ಅವತಾರಗಳೆಂದೇ ಇವರ ಧೃಢನಂಬಿಕೆ. ಅವುಗಳಿಗೆ ತಮ್ಮ ಸಕಲ ಇಷ್ಟಾರ್ಥವನ್ನು ಸಲ್ಲಿಸುವ ಶಕ್ತಿಯಿದೆಯೆಂದು ಅನೇಕ ಕಡೆಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಬಹು ಕಾಲದಿಂದಲೂ ವೈಷ್ಣವ ಭಕ್ತರಾದ ಆಳ್ವಾರುಗಳು ಭಗವಂತನ ಸಾಕಾರ ರೂಪವಾದ ಈ ವಿಗ್ರಹಗಳಲ್ಲಿ ತಮ್ಮ ಭಕ್ತಿಯನ್ನು ಬೀಜರೂಪದಲ್ಲಿ ಕೇಂದ್ರೀಕರಿಸಿ ಭಗವಂತನ ಅಸ್ತಿತ್ವವನ್ನು ಅವುಗಳಲ್ಲಿ ಕಂಡು ತಮ್ಮ ಭಕ್ತಿಯನ್ನು ಬೆಳಸಿ ಮನಸ್ಸು ಪರಿವರ್ತಿಸಿದ ಹಾಗೆಲ್ಲ ಅದನ್ನು ವಿಸ್ತರಿಸಿ ತನ್ಮೂಲಕ ಭಗವಂತನ ವಿಶ್ವರೂಪವನ್ನೂ ವಿರಾಡ್ರೂಪವನ್ನು ಸಾಕ್ಷಾತ್ಕರಿಸಿದ್ದಾರೆ.

– ( ಸಶೇಷ)



# ತೀರ್ಥಕ್ಷೇತ್ರ ದರ್ಶನ

## ಕನ್ಯಾಕುಮಾರಿ

ಎಚ್. ಕೆ. ಅನಸೂಯ ಸಂಪತ್

ಭಾರತ ಭೂಶಿರವೆಂದೆನಿಸಿದ ಕನ್ಯಾಕುಮಾರಿಯ ದಕ್ಷಿಣಕ್ಕೆ ಹಿಂದೂ ಮಹಾಸಾಗರ, ಪಶ್ಚಿಮಕ್ಕೆ ಅರಬ್ಬಿ ಸಮುದ್ರ, ಪೂರ್ವಕ್ಕೆ ಬಂಗಾಳಕೊಲ್ಲಿಗಳಿವೆ. ಸೂರ್ಯಾಸ್ತದ ರಮಣೀಯ ದೃಶ್ಯವನ್ನು, ಸೂರ್ಯೋದಯದ ನಯನಮನೋಹರತೆಯನ್ನು ಸವಿಯಲು ಕನ್ಯಾಕುಮಾರಿಗಿಂತ ಪ್ರಶಸ್ತವಾದ ಸ್ಥಳ ಬೇರೊಂದಿಲ್ಲ. ಈ ದೃಶ್ಯವನ್ನು ನೋಡಲು ಅಂದವಾದ ಈ ತಾಣಕ್ಕೆ ಸಹಸ್ರಾರು ಜನ ಬರುತ್ತಾರೆ. ಇಲ್ಲಿ ಕೆಂಪು ಮಣ್ಣು, ಕರಿಯ ಮಣ್ಣು, ಶುಭ್ರವಾದ ಬಿಳಿಯ ಮರಳು, ಕಪ್ಪೆಚಿಪ್ಪು, ಶಂಖ, ಕವಡೆಗಳನ್ನು ಎಲ್ಲೆಡೆ ಕಾಣಬಹುದು.

ಈ ಪವಿತ್ರವಾದ ಯಾತ್ರಾಸ್ಥಳವಾದ ಕನ್ಯಾಕುಮಾರಿಗೆ ಈ ಹೆಸರು ಬರಲು ಒಂದು ಕಥೆಯಿದೆ. ಅಖಂಡ ಭಾರತವನ್ನು ಆಳುತ್ತಿದ್ದ ಭರತ ಚಕ್ರವರ್ತಿಗೆ ಎಂಟು ಮಂದಿ ಗಂಡು ಮಕ್ಕಳು, "ಕುಮಾರಿ" ಎಂಬ ಹೆಣ್ಣು ಮಗಳು ಇದ್ದಳು. ಭರತನು ಈ ದೇಶವನ್ನು ಒಂಬತ್ತು ಭಾಗಗಳನ್ನಾಗಿ ಮಾಡಿ ಒಂದೊಂದು ಭಾಗಕ್ಕೂ ಒಬ್ಬೊಬ್ಬರನ್ನು ರಾಜಕುಮಾರರನ್ನಾಗಿ ನೇಮಿಸಿ, ದಕ್ಷಿಣದ ಈ ಭಾಗವನ್ನು "ಕುಮಾರಿಗೆ" ಒಪ್ಪಿಸಿದ. ಆದ್ದರಿಂದ "ಕುಮರಿ ನಾಡು" ಎಂದು ಈ ದೇಶವನ್ನು ಕರೆದರು. ಇಲ್ಲಿ ಆದಿಶಕ್ತಿ "ಕುಮಾರಿ"ಯ ರೂಪವನ್ನು ತಳೆದು ತಪಸ್ಸು ಮಾಡುತ್ತಿದ್ದಾಳೆ. ಆದ್ದರಿಂದ ಈ ಸ್ಥಳ "ಕನ್ಯಾಕುಮಾರಿ"ಯೆಂದೆನಿಸಿಕೊಂಡಿತು.

ಇಲ್ಲಿನ ದೇವಾಲಯವು ಸಹಸ್ರಾರು ವರ್ಷಗಳ ಹಿಂದೆ ಪರಶುರಾಮನಿಂದ ಕಟ್ಟಲ್ಪಟ್ಟಿತೆಂದು ಜನಶ್ರುತಿ. ಅನಂತರ ಈ ನಗರವನ್ನಾಳಿದ ರಾಜರುಗಳಿಂದ ಈ ವಿಶಾಲವಾದ ಮಂದಿರವು ಕಟ್ಟಲ್ಪಟ್ಟಿತೆಂದು ಪ್ರತೀತಿ. ಇಲ್ಲಿಗೆ ತೀರ್ಥಸ್ನಾನಕ್ಕಾಗಿ ಬಂದವರು, ಈ ಮಂದಿರದ ಉತ್ತರ ದಿಕ್ಕಿನಲ್ಲಿ ಸ್ವಲ್ಪವೇ ದೂರದಲ್ಲಿರುವ "ಪಾಪವಿನಾಶನಂ" ಎಂಬ ಪುಷ್ಕರಣಿಯಲ್ಲಿ ಮಿಂದು, ನಂತರ ಸಮುದ್ರ ತಡಿಯಲ್ಲಿರುವ ಮಿಕ್ಕ ತೀರ್ಥ ಸಲಿಲಗಳಲ್ಲಿ ಮೀಯುವುದು ಬಹು ಕಾಲದಿಂದಲೂ ನಡೆದುಬಂದ ವಾಡಿಕೆ.

ಮಂದಿರದ ಎರಡನೆ ಪ್ರಾಕಾರದಲ್ಲಿರುವ ಗಣೇಶನ ವಿಗ್ರಹವನ್ನು ಇಂದ್ರನೇ ಪ್ರತಿಷ್ಠೆ ಮಾಡಿ ಪೂಜಿಸಿದನೆಂದು ಹೇಳುತ್ತಾರೆ. ಇದರಿಂದಲೇ "ಇಂದ್ರ ಕಾತವಿನಾಯಕ"ನೆಂದು ಆ ಗಣಪತಿಗೆ ಹೆಸರೂ ಇದೆ. "ಪಾಪವಿನಾಶನಂ" ತೀರ್ಥವನ್ನು ಮಂಡೂಕ ತೀರ್ಥವೆಂದೂ ಕರೆಯುತ್ತಾರೆ.

ದೇವಿಯ ಸನ್ನಿಧಿಯಲ್ಲಿ ಪೂರ್ವ ದಿಕ್ಕಿಗೆ "ಸಾವಿತ್ರಿ", "ಗಾಯತ್ರಿ" ಮತ್ತು "ಸರಸ್ವತಿ"ಗಳೆಂಬ ತೀರ್ಥಗಳುಮಾತ್ರವಲ್ಲದೆ "ಕನ್ಯಾವಿನಾಯಕ ತೀರ್ಥ" ಮುಂತಾದ ಹಲವು ತೀರ್ಥಸ್ಥಾನಗಳಿವೆ. ದಕ್ಷಿಣಕ್ಕೆ ಹಿಂದೂ ಮಹಾಸಾಗರದಲ್ಲಿ ನಿರ್ಮಿತವಾದ ತಟಾಕದಲ್ಲಿ "ಮಾತೃ ತೀರ್ಥ", "ಪಿತೃ ತೀರ್ಥ", "ಭೀಮಾ ತೀರ್ಥ"ಗಳು ಸ್ಥಾಪಿತವಾಗಿವೆ. ಸಮುದ್ರ ತೀರದಲ್ಲಿ ಸ್ಥಾಣು ತೀರ್ಥವೂ ಇದೆ.

ಸ್ಥಾಣು ತೀರ್ಥದ ಮಹಾತ್ಮೆ ಮಹತ್ತರವಾದುದು. ಸ್ಥಾಣುವಿನ ಮೂರ್ತಿಗೆ ಅಭಿಷೇಕ ಮಾಡಿದ ತೀರ್ಥೋದಕಗಳು ಈ ಎಡೆಯಲ್ಲಿ ಸಮುದ್ರವನ್ನು ಸೇರುತ್ತದೆಂದು ಹೇಳುತ್ತಾರೆ. ಆದ್ದರಿಂದಲೇ ಅದಕ್ಕೆ ಆ ಹೆಸರು ಬಂದಿತು. ಈ ತೀರ್ಥದಲ್ಲಿ ಪ್ರತಿ ವರ್ಷವೂ ಚೈತ್ರ ಪೂರ್ಣಿಮಾ, ವೈಶಾಖದ ವಿಶಾಖ ನಕ್ಷತ್ರದಂದು, ಉತ್ತರಾಯಣ ಪುಣ್ಯಕಾಲ, ಮಹಾಲಯ ಅಮಾವಾಸ್ಯೆ, ಶಿವರಾತ್ರಿ ದಕ್ಷಿಣಾಯನ ಪುಣ್ಯಕಾಲ, ಕುಂಭಮಾಸದ ಉತ್ತರ ನಕ್ಷತ್ರದ ದಿನವೇ ಮುಂತಾದ ಪರ್ವದಿನಗಳಲ್ಲಿ ಸಾವಿರಾರು ಜನ ಯಾತ್ರಿಕರು ತೀರ್ಥಸ್ನಾನಮಾಡಿ ಕುಮಾರಿಯ ದರ್ಶನವನ್ನು ಪಡೆದು, ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುವರು.

ಹಿಂದೂಗಳ ಪ್ರಾಚೀನವಾದ ಧರ್ಮಗ್ರಂಥ, ಋಕ್, ಯಜುರ್, ಸಾಮ, ಅಥರ್ವಣ ಎಂಬ ನಾಲ್ಕು ಬಗೆಯ ವೇದಗಲ್ಲಿ ಋಗ್ವೇದವು ಕಾಶೀಮಹಿಮೆಯನ್ನು ಸಾರಿದರೆ, ಯಜುರ್ ವೇದವು ಕನ್ಯಾಕುಮಾರಿಯ ಮಹತ್ವವನ್ನು ಸಾರುತ್ತದೆ.

ಕನ್ಯಾಕುಮಾರಿಯಲ್ಲಿ ಕಂಡು ಬರುವ ಮತ್ತೊಂದು ಮುಖ್ಯವಾದ ತೀರ್ಥವೆಂದರೆ ಭದ್ರಕಾಳೀ ತೀರ್ಥ. ಈ ಜಲಾಶಯದ ನೀರು ಗಂಗೆಗೆ ಸಮಾನವೆಂದು ಪ್ರತೀತಿ. ಈ ಹಿನ್ನೆಲೆಯಲ್ಲಿ ಒಂದು ಕುತೂಹಲಕಾರಿ ಕಥೆಯು ಅಡಗಿದೆ. ತಪೋನಿರತೆಯಾದ ಪರಾಶಕ್ತಿಯ ಸೌಂದರ್ಯದ ಬಗೆಗೆ ತನ್ನ ದೂತರಿಂದ ಪ್ರಶಂಸೆಯನ್ನು ಕೇಳಿದ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಬಾಣಾಸುರನಿಗೆ. ಆ ಸೌಂದರ್ಯವನ್ನು ತಾನು ವಶಪಡಿಸಿಕೊಳ್ಳಬೇಕೆಂದು ಆಸೆಯಾಗಿ ಆಕೆಯಿದ್ದಲ್ಲಿಗೆ ತಾನೇ ಬಂದ. ತನ್ನ ಮನೋಗತವನ್ನು ಆಕೆಗೆ ತಿಳಿಸಿದಾಗ ಮೊದಲು ನನ್ನೊಡನೆ ಯುದ್ಧ ಮಾಡಿ ಗೆದ್ದು ನನ್ನನ್ನು ಸೋಲಿಸಿದರೆ ನಿನ್ನನ್ನು ಮದುವೆಯಾಗುವೆನೆಂದು ತಿಳಿಸಿ ಯುದ್ಧಕ್ಕೆ ಸನ್ನದ್ಧಳಾದಳು. ಯುದ್ಧದಲ್ಲಿ ಬಾಣಸುರನಿಗೆ ಸಹಾಯಕನಾಗಿ "ಮೂಕ" ನೆಂಬುವನು ನಿಂತ. ಆಗ ಆದಿಶಕ್ತಿಯೂ ಭದ್ರಕಾಳಿಯನ್ನು ಸೃಷ್ಟಿಸಿ ಮೂಕನೊಂದಿಗೆ ಯುದ್ಧಕ್ಕೆ ಕಳುಹಿಸಿದಳು. ಮೂಕನು ಭದ್ರಕಾಳಿಯನ್ನೆತ್ತಿಕೊಂಡು ಓಡುತ್ತಿರುವಾಗ "ಮೂಕಾಂಬಿಕೆ" ಎಂಬ ಎಡೆಯಲ್ಲಿ ಭದ್ರಕಾಳಿ ಅವನನ್ನು ಸಂಹರಿಸಿದಳು. ಈ ಜಾಗದಲ್ಲಿ ಇಂದು ಒಂದು ಶೂಲ ಸಾಕ್ಷಿಯಾಗಿ ನಿಂತಿದೆ. ಅನಂತರ ಬಾಣತೀರ್ಥ ಎಂಬೆಡೆಯಲ್ಲಿ ಬಾಣಸುರ ಕೊಲ್ಲಲ್ಪಟ್ಟ. ಸಾಯುವ ಮುನ್ನ ಬಾಣಸುರನು 'ನಾನು ಮೃತಿಯನ್ನು ಪಡೆದ ಜಾಗದಲ್ಲಿ ಒಂದು ಸ್ನಾನ ಘಟ್ಟವನ್ನು ಏರ್ಪಡಿಸಿ, ಅಲ್ಲಿ ಮಿಂದವರಿಗೆ ಗಂಗಾಸ್ನಾನದ ಫಲ ದೊರೆಯುವುದೆಂದು ಅನುಗ್ರಹಿಸಿ' ಎಂದು ಪ್ರಾರ್ಥಿಸಿದ. ಅಂತೆಯೇ ದೇವಿಯು ಅವನಿಚ್ಛೆಯನ್ನು ಈಡೇರಿಸಿದಳು.

ಈ ದೇವಾಲಯದಲ್ಲಿ ಪ್ರತಿದಿನ ಮುಂಜಾನೆ ಐದುಗಂಟೆಗೆ ಸಂಧಿ ಪೂಜೆಯಿಂದ ಆರಂಭವಾಗಿ ವಿಶ್ವರೂಪ, ನಿರ್ಮಾಲ್ಯ ದರ್ಶನ, ಮಾರ್ತಾಂಡ ಪೂಜೆ, ಮಹಾಭಿಷೇಕ, ಅಲಂಕಾರ ದೀಪಾರಾಧನೆಯೊಂದಿಗೆ ಅರ್ಚನೆ ಕೊನೆಗೊಳ್ಳುತ್ತದೆ. ಕುಮಾರಿಯರಾದ್ದರಿಂದ ದೇವಿಯವರಿಗೆ ಶಯನ ಗೃಹ ದೀಪಾರಾಧನೆ ಇರುವುದಿಲ್ಲ. ಏಕಾಂತ ದೀಪಾರಾಧನೆ ನಡೆಯುತ್ತದೆ. ಕನ್ಯಾಕುಮಾರಿಯ ಉತ್ತರ ಭಾಗದಲ್ಲಿ ಕಾಶೀವಿಶ್ವೇಶ್ವರ ಮಂದಿರ ಹಾಗೂ ಮುಖ್ಯ ತೀರ್ಥಗಳಲ್ಲೊಂದಾದ ಚಕ್ರತೀರ್ಥ ಇಲ್ಲಿ ಪ್ರಸಿದ್ಧ.

ನವರಾತ್ರಿಯೆಂದು ಅದರಲ್ಲೂ ವಿಶೇಷವಾಗಿ ವಿಜಯದಶಮಿಯಂದು ದೇವಿಯ ಉತ್ಸವ ಜರುಗುತ್ತದೆ. ವೈಶಾಖ ಮಾಸದ ಪುನರ್ವಸು ನಕ್ಷತ್ರದ ದಿನ ದೇವಿಯವರ ಮಂದಿರದಲ್ಲಿ "ವೈಶಾಖ ಧ್ವಜಾರೋಹಣ" ನಡೆಯುತ್ತದೆ. ಈ ಉತ್ಸವದ ದಿನಗಳಲ್ಲಿ ಪ್ರತಿದಿನವೂ ತ್ರಿಕಾಲದಲ್ಲಿ ದೇವಿಯವರ ಮೆರವಣಿಗೆ ನಡೆಯುತ್ತದೆ. ವಿಶಾಖೆಯ ದಿನ ರಾತ್ರಿ "ಜಲಯಾತ್ರೋತ್ಸವವು" ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಈ ಉತ್ಸವದೊಂದಿಗೆ "ವಿಶಾಖೋತ್ಸವ"ವು ಪೂರ್ಣವಾಗುತ್ತದೆ. ಕಾರ್ತೀಕದ ಕೃತ್ತಿಕಾ ನಕ್ಷತ್ರದಂದು ಕಾರ್ತೀಕ ದೀಪೋತ್ಸವವೂ ನಡೆಯುತ್ತದೆ.

ವೈಶಾಖದ ವಿಶಾಖೆ, ನವರಾತ್ರಿಯ ವಿಜಯದಶಮಿ ಮತ್ತು ಕಾರ್ತೀಕೆಯದಿನ ಇಡೀ ವರ್ಷದ ಈ ಮೂರು ದಿನಗಳಲ್ಲಿ ಮಾತ್ರ ಪೂರ್ವದ್ವಾರದ ಬಾಗಿಲು ತೆರೆಯುತ್ತದೆ.

ಕನ್ಯಾಕುಮಾರಿಯ ಸನ್ನಿಧಿಯ ಎದುರಿನ ಸಮುದ್ರದಲ್ಲಿ ವಿವೇಕಾನಂದರು ಈಜಿಕೊಂಡು ಹೋಗಿ ದೇವಿಯ ಅನುಗ್ರಹ ಹೊಂದಿ "ಶ್ರೀಪಾದ ಶಿಲೆ" ಎಂಬ ಶಿಲೆಯ ಮೇಲೆ ಯೋಗಸಿದ್ಧಿಯನ್ನು ಪಡೆದರು. ಅಲ್ಲಿಯೇ ಲೋಕವಿಖ್ಯಾತ ವೇದಾಂತಿ ವಿವೇಕಾನಂದರು ಆಹಾರವಿಲ್ಲದೆಯೇ ಹಲವು ದಿನಗಳು ಸಮಾಧಿಯಲ್ಲಿದ್ದರು. ಈ ಘಟನೆಯ ಸ್ಮರಣಾರ್ಥವಾಗಿ ಭಾರತದ ವೇದಾಂತ ಪರಂಪರೆಯ ಏಳಿಗೆಗಾಗಿ ಶ್ರಮಿಸಿದ ವಿವೇಕಾನಂದರ ನೆನಪಿನ ಈ ಸಂಸ್ಥೆ ಹಿಂದೂ ಧರ್ಮದ ಪ್ರಚಾರಕ್ಕಾಗಿ ಅಹರ್ನಿಶಿ ದುಡಿಯುತ್ತಿದೆ.

ಹಿಂದೂ ದೇಶದ ದಕ್ಷಿಣದ ತುಟ್ಟತುದಿಯಲ್ಲಿರುವ ಈ ನಯನ ಮನೋಹರ ಕ್ಷೇತ್ರವನ್ನು ದರ್ಶಿಸಿ, ಭುವನ ಮನೋಹರಿ ಕನ್ಯಾಕುಮಾರಿಯನ್ನು ಪೂಜಿಸಿ ಧನ್ಯತೆಯನ್ನು ಹೊಂದುವ ಜನ್ಮ ಸಾರ್ಥಕ. ಆಕೆಯ ಪವಿತ್ರತಮ ಆಶೀರ್ವಾದದಿಂದ ಅಖಂಡ ಭಾರತವೂ ಪುನೀತವಾಗಿ, ಭಕ್ತಾದಿಗಳೆಲ್ಲಾ ಸುಪ್ರೀತರಾಗಿ, ಬದುಕು ಪಾವನವಾಗುವುದರಲ್ಲಿ ಸಂಶಯವಿಲ್ಲ.

( 6ನೇ ಪುಟದಿಂದ )

ವ್ಯೈಮರೆತಿದ್ದಾರೆ. ಶ್ರೀಕೃಷ್ಣನನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ. ಯೋಗಿಗಳಾಗಿ ತಾವು ಅನುಭವಿಸಿದ, ಸುಂದರ ರೂಪ, ಶಿಷ್ಟರಕ್ಷಣೆಗಾಗಿ, ದುಷ್ಟಶಿಕ್ಷೆಗಾಗಿ, ಸ್ವಾಮಿಯುಮಾಡಿದ ಸಾಹಸ ಕಾರ್ಯಗಳನ್ನು ಭಕ್ತಿಯಿಂದ ಸ್ಮರಿಸಿ, ತಾವು ಕಂಡುದನ್ನು ಕಂಡಹಾಗೆ ಪದ್ಯರೂಪದಲ್ಲಿ ಹಾಡಿದ್ದಾರೆ. ಇವೇ ದಿವ್ಯಪ್ರಬಂಧಗಳು.

ಆಳ್ವಾರರುಗಳಲ್ಲಿ ನಮ್ಮಾಳ್ವಾರರು ಕಿರೀಟಪ್ರಾಯರು. ನಾಲ್ಕುವೇದಗಳ ಸಾರವನ್ನು ಪದ್ಯರೂಪದಲ್ಲಿ ಹಾಡಿದ್ದಾರೆ. ನಾಯಿಕಾಭಾವದಿಂದ ಪರಮಾತ್ಮರೂಪ ಮತ್ತು ಕಲ್ಯಾಣಗುಣಗಳನ್ನು ಅನುಭವಿಸಿದ್ದಾರೆ. ಅವರ ಕೃಷ್ಣಾನುಭವ ಅದ್ವಿತೀಯವಾಗಿದೆ. ಇಂತಹ ಅನುಭವದಲ್ಲಿ ಅವರು ಅನೇಕಸಲ ತಮ್ಮನ್ನೇ ತಾವು ಮರೆತಿದ್ದಾರೆ. ಶ್ರೀಕೃಷ್ಣನ ಜನನ, ಬಾಲ ಲೀಲೆ, ಗೋಪ ಗೋಪಿಯರನ್ನು ಅವನು ಅನುಗ್ರಹಿಸಿದುದು, ಪಾರ್ಥಸಾರಥಿಯಾದುದು, ಗೋವರ್ಧನ ಪರ್ವತವನ್ನು ಎತ್ತಿಹಿಡಿದು ಗೋಪಗೋವುಗಳನ್ನು ರಕ್ಷಿಸಿದುದು, ತನ್ನ ಮುರಲೀನಾದದಿಂದ ಪಶುಪ್ರಾಣಿಗಳನ್ನು ಆಕರ್ಷಿಸಿದುದು,– ಇತ್ಯಾದಿ ಶ್ರೀಕೃಷ್ಣ ವೃತ್ತಾಂತಗಳನ್ನು ನಮ್ಮಾಳ್ವಾರವರು ಅನನ್ಯಭಕ್ತಿಯಿಂದ ಸ್ಮರಿಸಿ, ಕೃತಕೃತ್ಯರಾಗಿರುವುದಲ್ಲದೆ, "ಕಣ್ಣಾನಲ್ಲಾಲ್ ಇಲ್ಲೈ ಕಂಡೀರ್" ಎಂದು ತಮ್ಮ ಶ್ರೀಕೃಷ್ಣಭಕ್ತಿಯನ್ನು ದೃಢಪಡಿಸಿದ್ದಾರೆ. ಶ್ರೀಕೃಷ್ಣಭಕ್ತಿಯೇ ಮೂರ್ತಿವೆತ್ತಂತೆ ನಮ್ಮಾಳ್ವಾರರು ಇದ್ದಿದ್ದ ಹಾಗೆಯೇ ಪೆರಿಯ ಆಳ್ವಾರರು, ಗೋದಾದೇವಿ ಮತ್ತು ಕುಲಶೇಖರ ಆಳ್ವಾರರು,– ಮುಂತಾಗಿ ಶ್ರೀಕೃಷ್ಣಭಕ್ತಿ ವಿಷಯವಾಗಿ ನೂರಾರು ಪದ್ಯಗಳನ್ನು ಹಾಡಿದ್ದಾರೆ. ಅವು ಇಂದಿಗೂ ಭಕ್ತಿಭರಿತ ಕಾವ್ಯಗಳಾಗಿವೆ.

ಕನ್ನಡ ಸಾಹಿತ್ಯದಲ್ಲಿ ಕೂಡ ಅನೇಕ ಸಂದರ್ಭಗಳಲ್ಲಿ ಶ್ರೀಕೃಷ್ಣಭಕ್ತಿಯು ಬಹು ಚೆನ್ನಾಗಿ ವ್ಯಕ್ತವಾಗಿದೆ. "ಪುಣ್ಯಮಿದು ಕೃಷ್ಣಚರಿತಾಮೃತಂ" ಎಂದು ಲಕ್ಷ್ಮೀಶಕವಿಯು ತನ್ನ ಕಾವ್ಯವನ್ನು ಕರೆದುಕೊಂಡಿದ್ದಾನೆ. ಕುಮಾರವ್ಯಾಸನ ಕರ್ಣಾಟಕ ಭಾರತ ಕಥಾಮಂಜರಿಯನ್ನು ಶ್ರೀಕೃಷ್ಣಕಥೆ ಎಂದೇ ಕರೆಯಲಾಗಿದೆ. ಶ್ರೀಕೃಷ್ಣನೇ ಈ ಕವಿಗಳ ಕಥಾನಾಯಕ. ಇವರ ಕಾವ್ಯಗಳಲ್ಲಿ ಶ್ರೀಕೃಷ್ಣಭಕ್ತಿಯನ್ನು ಪ್ರಜ್ವಲಗೊಳಿಸತಕ್ಕ ಅನೇಕ ಸಂದರ್ಭಗಳಿವೆ.

ಹಂಸಧ್ವಜರಾಜನು ಮಹಾ ಪರಾಕ್ರಮಿ. ಶ್ರೀಕೃಷ್ಣ ದರ್ಶನ ಮಾಡಬೇಕೆಂದು ಅಪೇಕ್ಷಿಸುತ್ತಾನೆ. ಅವನ ಮಗ ಸಾಹಸಿಯಾದ ಸುಧನ್ವನು ಪಾಂಡವರ ಯಜ್ಞಾಶ್ವವನ್ನು ಕಟ್ಟಿಹಾಕುವನು. ಇದರ ಉದ್ದೇಶ ಶ್ರೀಕೃಷ್ಣದರ್ಶನ. ಸುಧನ್ವನ ಶ್ರೀಕೃಷ್ಣಭಕ್ತಿಯನ್ನು ಕವಿಯು ಸುಂದರವಾಗಿ ವರ್ಣಿಸಿದ್ದಾನೆ. ಶ್ರೀಕೃಷ್ಣನ ಪರಾಕ್ರಮವನ್ನು ಸುಧನ್ವನ ತಾಯಿ ಚೆನ್ನಾಗಿ ಅರಿತಿದ್ದಳು. ಮಗನು ಯುದ್ಧಕ್ಕೆ ಹೋಗುವಾಗ, "ಶ್ರೀಕೃಷ್ಣನಿಗೆ ನೀನು ಯುದ್ಧದಲ್ಲಿ ವಿಮುಖನಾಗದಿರು" ಎನ್ನುವಳು. ಸುಧನ್ವನು ಕಾಳಗದಲ್ಲಿ ಕಲಿಯಾಗುತ್ತಾನೆ. ಅರ್ಜುನನು ಅವನನ್ನು ಗೆಲ್ಲಬೇಕಾದರೆ, ಶ್ರೀಕೃಷ್ಣನು ತನ್ನ ಪುಣ್ಯಪ್ರಭಾವವೆಲ್ಲವನ್ನೂ ಅರ್ಜುನನಿಗೆ ಧಾರೆ ಎರೆಯಬೇಕಾಗುತ್ತದೆ. ಈ ಸಂದರ್ಭದಲ್ಲಿ ಕವಿಯು ಶ್ರೀಕೃಷ್ಣಭಕ್ತಿಯನ್ನು ಮತ್ತೆ ಮತ್ತೆ ಪ್ರತಿಪಾದಿಸುತ್ತಾನೆ.

ಅರ್ಜುನ–ಬಭ್ರುವಾಹನ ಕಾಳಗ ಸಂದರ್ಭದಲ್ಲಿ ಬಭ್ರುವಾಹನನು ಪಾಂಡವರ ಯಜ್ಞಕುದುರೆ



ಯನ್ನು ಕಟ್ಟಿಹಾಕುತ್ತಾನೆ. ಆದರೆ ಬಭ್ರುವಾಹನ, ಯಜ್ಞಾಶ್ವವು ತನ್ನ ತಂದೆ ಅರ್ಜುನನಿಗೆ ಸೇರಿದ್ದೆಂದು ತನ್ನ ತಾಯಿಯಿಂದ ತಿಳಿದು ತನ್ನ ರಾಜ್ಯ, ಐಶ್ವರ್ಯ, ಯಜ್ಞಾಶ್ವ–ಎಲ್ಲವನ್ನೂ ಅರ್ಜುನನಿಗೆ ಅರ್ಪಿಸಲು ಬರುವನು. ಅರ್ಜುನನು ಬಭ್ರುವಾಹನನನ್ನು ಹೀಯಾಳಿಸಿ ಅದು ಹೇಡಿತನದ ಕೊಂಕು ಎಂದು ಅಲ್ಲಗಳೆಯುತ್ತಾನೆ. ಸ್ವತಃ ಪರಾಕ್ರಮಿಯಾದ ಬಭ್ರುವಾಹನ ಇದನ್ನು ಸಹಿಸಿಯಾನೆ? ಇಬ್ಬರಿಗೂ ಘೋರಕಾಳಗ ನಡೆಯುವುದು! ಪಿತುಃ ಶತಗುಣಂ ತತ್ರಃ ಎಂಬಂತೆ, ಬಭ್ರುವಾಹನನ ಕೈ ಮೇಲಾಗುವುದು. ಅರ್ಜುನನ ರಥ, ಸಾರಥಿ ಸೈನ್ಯವೆಲ್ಲವೂ ನಾಶವಾಗುವುದು. ಅವನು ಯುದ್ಧದಲ್ಲಿ ಗೆಲ್ಲಬೇಕಾದರೆ, ಶ್ರೀಕೃಷ್ಣನ ಬೆಂಬಲ, ದಿಗ್ದರ್ಶನ ಬೇಕೇಬೇಕು. ಪಾಂಡವರ ವಿಜಯದ ಹಿಂದೆ ಸೂತ್ರರೂಪಿಯಾದ ಶ್ರೀಕೃಷ್ಣಭಕ್ತಿ ಇರಲೇಬೇಕು ಎಂಬುದನ್ನು ಕವಿಯು ಬಹು ಸೊಗಸಾಗಿ ವ್ಯಕ್ತಪಡಿಸಿದ್ದಾನೆ.

ಹಾಗೆಯೇ ಮಯೂರಧ್ವಜನಕಥಾಸಂದರ್ಭದಲ್ಲಿ ಶ್ರೀಕೃಷ್ಣಭಕ್ತಿ ಹೊರಹೊಮ್ಮಿದೆ. ಮಯೂರಧ್ವಜನು ಮಹಾ ವಿಷ್ಣುಭಕ್ತ. ಅವನು ಏಳು ಅಶ್ವಮೇಧಯಾಗಗಳನ್ನು ಮಾಡಿ, ಎಂಟನೆಯದನ್ನು ಮಾಡಲು ನರ್ಮದಾನದೀತೀರದಲ್ಲಿ ಎಲ್ಲವನ್ನೂ ಸಿದ್ಧಪಡಿಸಿದ್ದಾನೆ. ಕೃಷ್ಣಾರ್ಜುನರು ಅಲ್ಲಿಗೆಬಂದು ಮಯೂರಧ್ವಜನನ್ನು ಗೆಲ್ಲಲಾರದೆ ನಯವಿನಯಗಳಿಂದ ಒಲಿಸಿಕೊಳ್ಳಲು ಪ್ರಯತ್ನಿಸುವರು. ಆಗ ಅವನು ಹೇ! ದೇವಾ! ಕೃಷ್ಣಪರಮಾತ್ಮ! ನಿನ್ನ ದರ್ಶನಸುಖ ಲಭಿಸಿದ ಮೇಲೆ, ಯಜ್ಞವೇಕೆ. ಯಜ್ಞದಿಂದ ಲಭಿಸುವ ಫಲವನ್ನು ನಿನ್ನ ದರ್ಶನದಿಂದಲೇ ಪಡೆದಾಯಿತು. ಧರ್ಮರಾಜನೇ ಯಾಗಮಾಡಲಿ. ಕುದುರೆಯನ್ನೂ ಯಜ್ಞ ಸಲಕರಣೆಗಳನ್ನೂ, ನನ್ನ ಸಕಲ ಐಶ್ವರ್ಯವನ್ನೂ, ಇಗೋ ನಿನ್ನ ಚರಣ ಕಮಲಗಳಲ್ಲಿ ಅರ್ಪಿಸುತ್ತೇನೆ' ಎಂದು ಮಯೂರಧ್ವಜನು ಶ್ರೀಕೃಷ್ಣಭಕ್ತಿಯನ್ನು ವ್ಯಕ್ತಪಡಿಸಿ ಕೈಮುಗಿದು ನಮಸ್ಕರಿಸುವನು.

ಕುರುಕ್ಷೇತ್ರ ಯುದ್ಧದ ಪ್ರಾರಂಭದಲ್ಲಿ ಅರ್ಜುನನು ಯುದ್ಧಮಾಡುವುದಿಲ್ಲವೆಂದೂ, ತನ್ನ ಬಂಧುಬಳಗವನ್ನು ಕೊಲ್ಲುವುದು ಮಹಾ ಪಾಪವೆಂದೂ, ವಿಮುಖನಾದಾಗ, ಶ್ರೀಕೃಷ್ಣನು ಯುದ್ಧಮಾಡುವುದು ಕ್ಷತ್ರಿಯಧರ್ಮವೆಂದು ತಿಳಿಸಿ, ಅದ್ದರಿಂದ ಅವನಿಗೆ ಶ್ರೇಯಸ್ಸು, ಪ್ರೇಯಸ್ಸು ಲಭಿಸುವುದೆಂದು ಅರ್ಜುನನಿಗೆ ಗೀತೋಪದೇಶ ಮಾಡುವನು. ಇದನ್ನು ದೃಢಪಡಿಸಲು ಶ್ರೀಕೃಷ್ಣನು ತನ್ನ ವಿಶ್ವರೂಪವನ್ನು ತೋರಿಸುವನು. ಇಂತಹ ವಿರಾಟ್ ಸ್ವರೂಪವನ್ನು ನೋಡಲು ಅರ್ಜುನನಿಗೆ ದಿವ್ಯ ಚಕ್ಷುವನ್ನು ಅನುಗ್ರಹಿಸುವನು. ಈ ದಿವ್ಯ ರೂಪವನ್ನು ಕಂಡು ಅರ್ಜುನನಿಗೆ ಪರಮಾಶ್ಚರ್ಯವಾದುದಲ್ಲದೆ, ಶ್ರೀಕೃಷ್ಣನಲ್ಲಿ ಅವನ ಭಕ್ತಿ ಹೆಚ್ಚುವುದು ಸ್ವಾಮಿಯನ್ನು ಕುರಿತು ಹೀಗೆ ಪ್ರಾರ್ಥಿಸುವನು.

ಪಿತಾಸಿ ಲೋಕಸ್ಯ ಚರಚರಾಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ
ಲೋಕತ್ರಯೇಽಪ್ಯ ಪ್ರತಿಮಪ್ರಭಾವಃ ॥

ತಸ್ಮಾತ್ ಪ್ರಣಮ್ಯ ಪ್ರಣಿಧಾಯಕಾಯಂ
ಪ್ರಸಾದಯೇತ್ವಾ ಮಹಮೀಶಮೀಡ್ಯಂ
ಪಿತೇವ ಪುತ್ರಸ್ಯ ಸಖೇವಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವಸೋಢುಂ ॥

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ
ತದೇವ ಮೇ ದರ್ಶಯ ದೇವರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥

ಕಿರೀಟಿ ನಂ ಗದಿನಂ ಚಕ್ರಹಸ್ತಂ
ಇಚ್ಛಾಮಿತ್ವಾಂ ದ್ರಷ್ಟುಮಹಂ ತಥೈವ
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವವಿಶ್ವಮೂರ್ತೇ ॥

ಶ್ರೀಕೃಷ್ಣನು ತೋರಿಸಿದ ವಿಶ್ವರೂಪವನ್ನು ಕಂಡು ಪರಮಾಶ್ಚರ್ಯಭರಿತನಾಗಿ ತನ್ನ ಹಿಂದಿನ ದಿವ್ಯಮಂಗಳ ವಿಗ್ರಹರೂಪವನ್ನು ಸೌಂದರ್ಯ ವನ್ನು ತೋರಿಸುವಂತೆ ಅರ್ಜುನನು ಪ್ರಾರ್ಥಿ ಸುವನು. ಇದಾದಮೇಲೆ ಅರ್ಜುನನ ಶ್ರೀಕೃಷ್ಣ ಭಕ್ತಿ ನೂರ್ಮಡಿ ಹೆಚ್ಚಿತ್ತು.

ದೃಷ್ಟ್ವೇದಂ ಮಾನುಷಂ ರೂಪಂ
ತವ ಸೌಮ್ಯಂ ಜನಾರ್ಧನ
ಇದಾನೀಮಸ್ಮಿ ಸಂವೃತ್ತಃ
ಸಚೇತಾಃ ಪ್ರಕೃತಿಂ ಗತಾಃ ।

ಎಂದು ಪ್ರಾರ್ಥಿಸಿ, ಪ್ರಮಾದದಿಂದ ಆಗಿರುವ ತನ್ನ ಅಪರಾಧಗಳನ್ನು ಮನ್ನಿಸುವಂತೆ ಕ್ಷಮಾ ಯಾಚನೆ ಮಾಡುವನು.

ಸಖೇತಿಮತ್ವಾ ಪ್ರಸಭಂ ಯದುಕ್ತಂ
ಹೇ! ಕೃಷ್ಣ, ಹೇ ಯಾದವ, ಹೇ ಸಖೇತಿ।
ಅಜಾನತಾ ಮಹಿಮಾನಂ ತ ವೇದಂ
ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥

ಹೇ! ಕೃಷ್ಣಪರಮಾತ್ಮಾ! ನಿನ್ನ ಮಹಾ ಮಹಿಮೆಯನ್ನು ತಿಳಿಯದೆ, ಹೇ! ಕೃಷ್ಣಾ! ಯದುನಂದನಾ! ಹೇ! ಮಿತ್ರಾ! ಎಂದು ಸಲಿಗೆ ಯಿಂದ ಕರೆದೆ. ನೀನು ಸರ್ವೇಶ್ವರನು, ವಿರಾ ಡ್ರೂಪನು ಎಂಬುದನ್ನು ಈಗ ಕಂಡೆ, ದೇವಾ! ನನ್ನ ಅಪರಾಧವನ್ನು ಕ್ಷಮಿಸು ಎಂದು ಅರ್ಜುನನು ಭಕ್ತಿಯಿಂದ ಶರಣಾಗತಿ ಮಾಡುವನು.

ನಷ್ಟೋಮೋಹಃ ಸ್ಮೃತಿ ಲಬಾ
ತ್ವತ್ಪ್ರಸಾದಾನ್ಮಯಾಚ್ಯುತ।
ಸ್ಥಿತೋಸ್ಮಿಗತ ಸಂದೇಹಃ
ಕರಿಷ್ಯೇ ವಚನಂ ತವ ॥

ಎಂದು ಅನನ್ಯ ಭಕ್ತಿಯಿಂದ ಅರ್ಜುನನು ಪ್ರಾರ್ಥಿಸುವನು

ಅರ್ಜುನನ ಭಕ್ತಿಪೂರ್ವಕಮಾತುಗಳಿಂದ ಪರಮ ಹರ್ಷಿತನಾದ ಶ್ರೀಕೃಷ್ಣನು, ಅರ್ಜುನನನ್ನು ನೆಪಮಾಗಿಟ್ಟುಕೊಂಡು ಇಡೀ ಮಾನವಕೋಟಿಗೆ ಹೀಗೆ ಉಪದೇಶ ಮಾಡುತ್ತಾನೆ.

ಮನ್ಮನಾ ಭವ ಮದ್ಭಕ್ತೋ
ಮದ್ಯಾಜೀ ಮಾಂ ನಮಸ್ಕುರು।
ಮಾಮೇವೈಷ್ಯಸಿ ಸತ್ಯಂತೇ
ಪ್ರತಿಜಾನೇ ಪ್ರಿಯೋ ಸಿ ಮೇ।

ಇದು ಶ್ರೀಕೃಷ್ಣಭಕ್ತಿಯ ಪರಾಕಾಷ್ಠೆ

ಯೋಚ ವೇದವಿದೋ ವಿಪ್ರಾಃ
ಯೇಚಾಧ್ಯಾತ್ಮವಿದೋ ಜನಾಃ।
ತೇ ವದಂತಿ ಮಹಾತ್ಮಾನಂ
ಕೃಷ್ಣಂ ಧರ್ಮಂ ಸನಾತನಂ ॥

ಎಲ್ಲವನ್ನೂ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಅರ್ಪಿಸಿ, ಅವನನ್ನು ಪ್ರೀತಿಯಿಂದ ಭಜಿಸಬೇಕು. ಸ್ತುತಿಸಬೇಕು. ಅನೇಕ ದಿವ್ಯಪುರುಷರು ಹಾಗೆ ಮಾಡಿದ್ದಾರೆ. ಅನೇಕ ಕವಿಗಳು ಶ್ರೀಕೃಷ್ಣನನ್ನು ತಮ್ಮ ಕಾವ್ಯದ ನಾಯಕನನ್ನಾಗಿ ಮಾಡಿ ಕೊಂಡು ಪ್ರಾರ್ಥಿಸಿದ್ದಾರೆ. ಉಪದೇಶವಾಣಿ, ಭಾರತದ ಅಧ್ಯಾತ್ಮಜ್ಯೋತಿಯನ್ನು ಹೆಚ್ಚು ಪ್ರಕಾಶಪಡಿಸುತ್ತದೆ. ಇಂತಹ ಶ್ರೀಕೃಷ್ಣನಾಮ ಸ್ಮರಣೆ, ಧ್ಯಾನ, ಅರ್ಚನೆ ಎಲ್ಲವೂ ಶ್ರೀಕೃಷ್ಣಭಕ್ತಿ ಯನ್ನು ಹೆಚ್ಚಿಸುವುವು. ಹೀಗೆ ಮಾಡುವುದು ಮಾನವನ ಕರ್ತವ್ಯ. ಇದರಿಂದ ಮೋಕ್ಷ ದೊರೆಯುವುದು. ಇದೇ ಕೃಷ್ಣಭಕ್ತಿಯ ಫಲ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣ ಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ 7–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

(8ನೇ ಪುಟದಿಂದ)

ಅರ್ಜುನ, ನಾನು ಮಾಡಬೇಕಾದ್ದೆಂಬುದು ಮೂರು ಲೋಕದಲ್ಲಿಯೂ ಏನೇನೂ ಇಲ್ಲ. ನಾನು ಕರ್ಮದಿಂದ ಪಡೆಯಬೇಕಾದ್ದೂ ಏನೂ ಇಲ್ಲ. ಆದರೂ ನಾನು ಕರ್ಮದಲ್ಲಿ ತೊಡಗಿಕೊಂಡೇ ಇದ್ದೇನೆ.

ಯದಿ ಹ್ಯಹಂ ನ ವರ್ತೇಯಂ
ಜಾತು ಕರ್ಮಣ್ಯತಂದ್ರಿತಃ ।
ಮಮ ವರ್ತ್ಮಾನುವರ್ತಂತೇ
ಮನುಷ್ಯಾಃ ಪಾರ್ಥ ಸರ್ವಶಃ ॥ 23

ಅರ್ಜುನ, ನಾನು ಎಂದಿಗೂ ಆಲಸ್ಯವಿಲ್ಲದೆ ಕರ್ಮದಲ್ಲಿ ತೊಡಗದೆ ಇದ್ದರೆ, ಜನರು ಎಲ್ಲ ಬಗೆಯಿಂದಲೂ ನನ್ನ ದಾರಿಯನ್ನು ಹಿಂಬಾಲಿಸಿ ಆಲಸರಾಗಿ ಬಿಡುತ್ತಾರೆ.

ಉತ್ಸೀದೇಯುರಿಮೇ ಲೋಕಾ ನ
ಕುರ್ಯಾಂ ಕರ್ಮ ಚೇದಹಮ್ ।
ಸಂಕರಸ್ಯ ಚ ಕರ್ತಾ ಸ್ಯಾಂ
ಉಪಹನ್ಯಾಮಿಮಾಃ ಪ್ರಜಾಃ ॥ 24

ನಾನು ಕರ್ಮವನ್ನು ಮಾಡದೆ ಹೋದರೆ ಈ ಲೋಕಗಳು ಹಾಳಾದಾವು, ನಾನು ಧರ್ಮದ ಕಲಬೆರಕೆಗೂ ಕಾರಣನಾದೇನು, ಈ ಜನರ ಪತನಕ್ಕೆ ಕಾರಣನಾದೇನು.

ಸಕ್ತಾಃ ಕರ್ಮಣ್ಯವಿದ್ವಾಂಸೋ
ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಃ
ಚಿಕೀರ್ಷುರ್ಲೋಕಸಂಗ್ರಹಮ್ ॥ 25

ಅರ್ಜುನ ತಿಳಿಯದವರು ಫಲದಾಸೆಯಿಂದ ಕರ್ಮವನ್ನು ಹೇಗೆ ಮಾಡುತ್ತಾರೋ ಹಾಗೆಯೇ ತಿಳಿದವರು ಜನರಿಗೆ ಮಾದರಿಯಾಗಬೇಕೆಂದು ಫಲದಾಸೆ ಇಲ್ಲದೆ ಮಾಡಬೇಕು.

ನ ಬುದ್ಧಿಭೇದಂ ಜನಯೇತ್
ಅಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ಸರ್ವಕರ್ಮಾಣಿ
ವಿದ್ವಾನ್ ಯುಕ್ತಃ ಸಮಾಚರನ್ ॥ 26

ತಿಳುವಳಿಕೆ ಇಲ್ಲದೆ ಕರ್ಮದ ಫಲವನ್ನು ಬಯಸುವರಿಗೆ ಬುದ್ಧಿ ಭೇದ ಮಾಡಿ ಅವರನ್ನು ಗೊಂದಲಗೊಳಿಸಬಾರದು. ತಿಳಿದವನು ಫಲದಾಸೆಯಿಲ್ಲದೆ ಮಾಡುತ್ತ ಎಲ್ಲ ಕರ್ಮಗಳನ್ನೂ ಮಾಡಿಸಬೇಕು.

ಪ್ರಕೃತೇಃ ಕ್ರಿಯಮಾಣಾನಿ
ಗುಣೈಃ ಕರ್ಮಾಣಿ ಸರ್ವಶಃ ।
ಅಹಂಕಾರವಿಮೂಢಾತ್ಮಾ
ಕರ್ತಾಽಹಮಿತಿ ಮನ್ಯತೇ ॥ 27

ಅಹಂಕಾರದಿಂದ ತಲೆಕೆಡಿಸಿಕೊಂಡವನು ಮಾಯೆಯ ಅಧೀನವಾಗಿ ಇಂದ್ರಿಯಗಳಿಂದಾಗುವ ಕರ್ಮಗಳನ್ನು ತಾನೇ ಮಾಡುವೆನೆಂದು ತಿಳಿಯುತ್ತಾನೆ.

ತತ್ತ್ವವಿತ್ತು ಮಹಾಬಾಹೋ
ಗುಣಕರ್ಮವಿಭಾಗಯೋಃ ।
ಗುಣಾ ಗುಣೇಷು ವರ್ತಂತ
ಇತಿ ಮತ್ವಾ ನ ಸಜ್ಜತೇ ॥ 28

ಅರ್ಜುನ, ಗುಣಗಳ ಮತ್ತು ಕರ್ಮಗಳ ವಿಂಗಡದ ನಿಜವನ್ನರಿತವನಾದರೋ ಇಂದ್ರಿಯ ಮತ್ತು ವಿಷಯಗಳ ಸಂಬಂಧದ ತಿರುಳನ್ನು ತಿಳಿದು ತಾನು ಮಾಡುವವನೆಂದು ಅಭಿಮಾನಗೊಳ್ಳುವುದಿಲ್ಲ.

ಪ್ರಕೃತೇರ್ಗುಣಸಂಮೂಢಾಃ
ಸಜ್ಜಂತೇ ಗುಣಕರ್ಮಸು ।
ತಾನಕೃತ್ಸ್ನವಿದೋ ಮಂದಾನ್
ಕೃತ್ಸ್ನವಿನ್ನ ವಿಚಾಲಯೇತ್ ॥ 29

ಇಂದ್ರಿಯಗಳ ಮಾಯೆಗೆ ಒಳಗಾಗುವವರು ವಿಷಯ ಮೋಹದಲ್ಲಿ ಮುಳುಗಿಬಿಡುತ್ತಾರೆ. ತತ್ತ್ವದ ತಿರುಳು ತಿಳಿದಿಲ್ಲದ ಆ ದಡ್ಡರನ್ನು ಚೆನ್ನಾಗಿ ತಿಳಿದವನು ಕದಲಗೊಡಬಾರದು.

ಮಯಿ ಸರ್ವಾಣಿ ಕರ್ಮಾಣಿ
ಸನ್ನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀರ್ನಿರ್ಮಮೋ ಭೂತ್ವಾ
ಯುಧ್ಯಸ್ವ ವಿಗತಜ್ವರಃ ॥ 30

ಎಲ್ಲರೊಳಗೂ ನಾನು ಇರುವೆನೆಂದರಿತು ಎಲ್ಲ ಕರ್ಮಗಳನ್ನೂ ನನಗೊಪ್ಪಿಸಿ ಫಲದ ಬಯಕೆಯನ್ನೂ, ನನ್ನದೆಂಬ ಅಭಿಮಾನವನ್ನೂ ತೊರೆದು ನಿಶ್ಚಿಂತನಾಗಿ ಯುದ್ಧ ಮಾಡು.

ಯೇ ಮೇ ಮತಮಿದಂ ನಿತ್ಯಂ
ಅನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ
ಮುಚ್ಯಂತೇ ತೇಽಪಿ ಕರ್ಮಭಿಃ ॥ 31

ಈ ನನ್ನ ಅಭಿಪ್ರಾಯವನ್ನು ಯಾರು ಅಸೂಯೆ ತಾಳದೆ ಯಾವಾಗಲೂ ನನ್ನ ಮೇಲಿನ ವಿಶ್ವಾಸದಿಂದ ಆಚರಿಸುತ್ತಾರೋ ಅವರು ಕೂಡ ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾರೆ.

ಯೇ ತ್ವೇತದಭ್ಯಸೂಯಂತೋ
ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್
ವಿದ್ಧಿ ನಷ್ಟಾನಚೇತಸಃ ॥ 32

ಅಸೂಯೆಯಿಂದ ನನ್ನ ಅಭಿಪ್ರಾಯವನ್ನು ಆಚರಣೆಗೆ ತರದೆ ತಿರಸ್ಕರಿಸುವವರು ಜ್ಞಾನದ ಮಾರ್ಗವನ್ನೇ ಅರಿಯದ ಅವಿವೇಕಿಗಳು. ಅವರು ತಮ್ಮ ನಾಶವನ್ನು ತಾವೇ ಮಾಡಿಕೊಳ್ಳುವವರೆಂದು ತಿಳಿ.

ಸದೃಶಂ ಚೇಷ್ಟತೇ ಸ್ವಸ್ಯಾಃ
ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾಂತಿ ಭೂತಾನಿ
ನಿಗ್ರಹಃ ಕಿಂ ಕರಿಷ್ಯತಿ ॥ 33

ಬಲ್ಲವನು ಕೂಡ ತನ್ನ ಸ್ವಭಾವಕ್ಕೆ ಸರಿಯಾಗಿ ನಡೆಯುವನು. ಎಲ್ಲ ಪ್ರಾಣಿಗಳೂ ಹುಟ್ಟು ಗುಣವನ್ನು ಹಿಂಬಾಲಿಸುತ್ತವೆ. ನಿಗ್ರಹದಿಂದ ಏನೂ ನಡೆಯದು.

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ
ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್
ತೌ ಹ್ಯಸ್ಯ ಪರಿಪಂಥಿನೌ ॥ 34

ಪ್ರತಿಯೊಂದು ಇಂದ್ರಿಯದ ವಿಷಯದಲ್ಲು ರಾಗ–ದ್ವೇಷಗಳು ನೆಲಸಿವೆ. ಅವುಗಳಿಗೆ ಅಡಿಯಾಳಾಗಬಾರದು. ಈ ರಾಗದ್ವೇಷಗಳೇ ಸಾಧಕನಿಗೆ ಶತ್ರುಗಳು.

ಶ್ರೇಯಾನ್ ಸ್ವಧರ್ಮೋ ವಿಗುಣಃ
ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ
ಪರಧರ್ಮೋ ಭಯಾವಹಃ ॥ 35

ತನಗೆ ಅಸಹಜವಾದ ಧರ್ಮವನ್ನು ಚೆನ್ನಾಗಿ ನಡೆಸುವುದಕ್ಕಿಂತ ಕಿಂಚಿದೂನವಾದರೂ ಸಹಜ ಧರ್ಮವನ್ನೆ ಆಚರಿಸುವುದು ಮೇಲು. ತನ್ನ ಧರ್ಮದಲ್ಲಿ ಸಾಯುವುದಾದರೂ ಮೇಲು. ಪರಧರ್ಮವು ಆಪತ್ತಿಗೆ ಆಹ್ವಾನ.

ಅರ್ಜುನ ಉವಾಚ–

ಅಥ ಕೇನ ಪ್ರಯುಕ್ತೋಽಯಂ
ಪಾಪಂ ಚರತಿ ಪೂರುಷಃ ।
ಅನಿಚ್ಛನ್ನಪಿ ವಾರ್ಷ್ಣೇಯ
ಬಲಾದಿವ ನಿಯೋಜಿತಃ ॥ 36

ಅರ್ಜುನ : ಕೃಷ್ಣ, ಹಾಗಾದರೆ ಈ ಮನುಷ್ಯನು ತನಗೆ ಬೇಡವಾದರೂ ಬಲವಂತಕ್ಕೆ ಬಲಿಯಾದವನಂತೆ ಯಾರಿಂದ ಪ್ರೇರಿತನಾಗಿ ಪಾಪವನ್ನು ಮಾಡುತ್ತಾನೆ ?

ಶ್ರೀಭಗವಾನುವಾಚ–

ಕಾಮ ಏಷ ಕ್ರೋಧ ಏಷ
ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ
ವಿದ್ಧ್ಯೇನಮಿಹ ವೈರಿಣಮ್ ॥ 37

ಶ್ರೀಕೃಷ್ಣ : ರಜೋಗುಣದಿಂದ ಹುಟ್ಟಿದ, ಸಿಟ್ಟಿಗೂ ತವರಾದ ಈ ಬಯಕೆ ಇದಕ್ಕೆಲ್ಲ ಕಾರಣ. ಎಷ್ಟು ತಿನ್ನಿಸಿದರೂ, ಇನ್ನಷ್ಟು ಬೇಕೆನ್ನುವ ಮಹಾಪಾಪಿ ಈ ಬಯಕೆಯನ್ನು ಬಾಳಿನಲ್ಲಿ ದೊಡ್ಡ ಹಗೆಯೆಂದು ತಿಳಿ.

ಧೂಮೇನಾವ್ರಿಯತೇ ವಹ್ನಿಃ
ಯಥಾದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಃ
ತಥಾ ತೇನೇದಮಾವೃತಮ್ ॥ 38

ಬೆಂಕಿಗೆ ಹೊಗೆಯ ಮುಸುಕು, ಕನ್ನಡಿಗೆ ಕೊಳೆಯ ಮುಸುಕು, ಗರ್ಭಕ್ಕೆ ಕೋಶದ ಮುಸುಕು, ಹಾಗೆಯೆ ಜಗತ್ತಿಗೆಲ್ಲ ಕಾಮದ ಮುಸುಕು.

ಆವೃತಂ ಜ್ಞಾನಮೇತೇನ
ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌಂತೇಯ
ದುಷ್ಪೂರೇಣಾನಲೇನ ಚ ॥ 39

ಅರ್ಜುನ, ತಿಳಿದವರ ನಿತ್ಯಶತ್ರುವಾದ, ಎಷ್ಟು ತಿನಿಸಿದರೂ ಸಾಕೆನಿಸದ ಈ ಕಾಮದ ಮುಸುಕಿನಿಂದ ತಿಳಿವು ಮರೆಯಾಗಿದೆ.

ಇಂದ್ರಿಯಾಣಿ ಮನೋ ಬುದ್ಧಿಃ
ಅಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷಃ
ಜ್ಞಾನಮಾವೃತ್ಯ ದೇಹಿನಮ್ ॥ 40

ಇಂದ್ರಿಯಗಳು, ಮನಸ್ಸು, ಬುದ್ಧಿ –ಇವೇ ಕಾಮದ ವಾಸಸ್ಥಾನ, ಇದು ಇವುಗಳ ಮೂಲಕ ತಿಳಿವನ್ನು ಮರೆಮಾಡಿ ಮನುಷ್ಯರನ್ನು ಮಂಕುಗೊಳಿಸುತ್ತದೆ.

ತಸ್ಮಾತ್ತ್ವಮಿಂದ್ರಿಯಾಣ್ಯಾದೌ
ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ
ಜ್ಞಾನವಿಜ್ಞಾನನಾಶನಮ್ ॥ 41

ಅರ್ಜುನ, ಆದುದರಿಂದ ನೀನು ಮೊದಲು ಇಂದ್ರಿಯಗಳನ್ನು ಬಿಗಿಹಿಡಿದು ಜ್ಞಾನವನ್ನು ಅನುಭವವನ್ನೂ ಹಾಳುಮಾಡುವ ಈ ಪಾಪಿಯನ್ನು ಗೆಲ್ಲು.

ಇಂದ್ರಿಯಾಣಿ ಪರಾಣ್ಯಾಹುಃ
ಇಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ
ಯೋ ಬುದ್ಧೇಃ ಪರತಸ್ತು ಸಃ । 42

ಸ್ಥೂಲ ದೇಹಕ್ಕಿಂತ ಇಂದ್ರಿಯಗಳು ಹೆಚ್ಚಿನವು ಎನ್ನುವರು. ಇಂದ್ರಿಯಗಳಿಗಿಂತಲೂ ಮನಸ್ಸು ಹೆಚ್ಚಿನದು. ಮನಸ್ಸಿಗಿಂತಲೂ ಬುದ್ಧಿ ಹೆಚ್ಚಿನದು. ಬುದ್ಧಿಗೂ ನಿಲುಕದೆ ಅದರಾಚೆ ಇರುವವನೇ ಭಗವಂತ.

ಏವಂ ಬುದ್ಧೇಃ ಪರಂ ಬುದ್ಧ್ವಾ
ಸಂಸ್ತಭ್ಯಾತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ
ಕಾಮರೂಪಂ ದುರಾಸದಮ್ ॥ 43

ಅರ್ಜುನ, ಹೀಗೆ ಬುದ್ಧಿಗೂ ನಿಲುಕದ ಹಿರಿಯ ತತ್ತ್ವವನ್ನು ತಿಳಿದು ಪ್ರಯತ್ನದಿಂದ ಮನಸ್ಸನ್ನು ನಿಯಂತ್ರಿಸಿ ಕಾಮವೆಂಬ ಕೆಟ್ಟ ಶತ್ರುವನ್ನು ಗೆಲ್ಲು.

3ನೇ ಅಧ್ಯಾಯವು ಮುಗಿದುದು.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕರ್ಮಯೋಗೋನಾಮ ತೃತೀಯೋಽಧ್ಯಾಯಃ ॥

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ, 2ನೇ ಅರ್ಚನೆ.
,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಅರ್ಜಿತ)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 6–30 ವರೆಗೆ ಅಭಿಷೇಕ (ಅರ್ಜಿತ)
,, 6–30 ರಿಂದ 8–00 ವರೆಗೆ ಸಮರ್ಪಣೆ
,, 8–00 ರಿಂದ 9–00 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–00 ರಿಂದ 9–30 ವರೆಗೆ ಬಲಿ, ಶಾತ್ತುಮೊರೆ
,, 9–30 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಶುಕ್ರವಾರಗಳಲ್ಲಿ ಉಯ್ಯಾಲೆಸೇವೆ, ವಾಹನ ಸೇವೆಗಳು, ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸಂತಿಯಸಾಲಿನಲ್ಲಿ ಸೇರುವಿಕೆ) | ರೂ 25-00 |
| ಸುಪ್ರಭಾತ | ರೂ 25-00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಪುನುಗು* | ರೂ 200 |
| 4. | ಜಾಫ್ರಾ* | ರೂ 100 |
| 5. | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3500 |
| 7. | ತಿರುಪ್ಪಾವಡಾ[2] | ರೂ 5000 |
| 8. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ಪುಷ್ಪಯೋಗ | ರೂ 3500 |
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 1000 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 5000 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75-00 |
| ಟಿ.ಬಿ ಸಿ ಒಳಗಿನ ಕಾಟೇಜುಗಳು | " | ರೂ 50-00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50-00 |
| ಆ) ಮೂಲೆಯ ಕೋಣೆಗಳು | ,, | ರೂ 40-00 |
| ಇ) ಕಿರಿಯ ಕೋಣೆಗಳು | ,, | ರೂ 35-00 |
| ಎಚ್. ಆರ್. ಜಿ. ಕಾಟೇಜು | ,, | ರೂ 150-00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80-00 |
| ಗೋಗಿನೇನಿ ಕಾಟೇಜು | ,, | ರೂ 80-00 |
| ಸಿ ಸಿ. ಕಾಟೇಜು | ,, | ರೂ 100-00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50-00 |
| ಎ.ಟಿ.ಸಿ. ನಂ. 39 | ,, | ರೂ 80-00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20-00 |
| ಶೇಷಾದ್ರಿನಗರ ,, | ,, | ರೂ 20-00 |
| ಅಂಜನಾದ್ರಿನಗರ ,, | ,, | ರೂ 20-00 |
| ಗರುಡಾದ್ರಿನಗರ ,, | ,, | ರೂ 20-00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20-00 |
| ನಾಲ್ಕು " | ರೂ 25-00 |
| ಒಂದು " | ರೂ 15-00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50-00 |
| ,, ಒಂದು ಹಾಸಿಗೆಯ ಕೋಣೆ | ರೂ 30-00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20-00 |

ವಿವರಗಳಿಗೆ; ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ-ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

# ವಾರ್ತಾಲಹರಿ

## ವಿಚಾರಣಾಕೇಂದ್ರದ ಉದ್ಘಾಟನೆ.

ತಿರುಪತಿ ರೈಲ್ವೆ ನಿಲ್ದಾಣದಲ್ಲಿ, ಆರ್. ಟಿ. ಸಿ. ನಿಲ್ದಾಣದಲ್ಲಿ, ಶ್ರೀ ವೆಂಕಟೇಶ್ವರ ಸ್ವಾಮಿಯ ದರ್ಶನಕ್ಕೆಂದು ಬರುವ ಸಹಸ್ರ ಸಂಖ್ಯೆಯ ಯಾತ್ರಿಕರ ಅನುಕೂಲಗಳನ್ನು ಅವರಿಗೆ ತಿಳಿಸಲು ವಿಚಾರಣಾ ಕೇಂದ್ರ ಒಂದನ್ನು ತೆರೆಯಬೇಕೆಂಬ ಏರ್ಪಾಡುಗಳನ್ನು ಮಾಡಲಾಗುತ್ತದೆ ಎಂಬುದನ್ನು ಈ ಹಿಂದೆ ಸಪ್ತಗಿರಿಯಲ್ಲಿ ಪ್ರಕಟಿಸಲಾಗಿದ್ದಿತು. ಅದರಂತೆ ತಿರುಪತಿಯ ರೈಲ್ವೆ ನಿಲ್ದಾಣದಲ್ಲಿ ತಿ. ತಿ. ದೇ. ವಿಚಾರಣಾ ಕೇಂದ್ರ ಇದೇ ಜುಲೈ ಹದಿನೈದರಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ ಅವರಿಂದ ಸರಳ ಸಮಾರಂಭವೊಂದರಲ್ಲಿ ಉದ್ಘಾಟಿತವಾಯಿತು. ರೈಲು ಮೂಲಕ ದೇಶದ ನಾನಾ ಮೂಲೆಗಳಿಂದ ತಿರುಪತಿಗೆ ಆಗಮಿಸುವ ಯಾತ್ರಿಕರು ತಿರುಪತಿ ತಿರುಮಲೆಗಳಲ್ಲಿನ ತಮ್ಮ ವಸತಿ ಸೌಕರ್ಯ, ತಾವು ಮಾಡಬಹುದಾದ ಸೇವೆಗಳು ಮೊದಲಾದವುಗಳ ಬಗ್ಗೆ ಇಲ್ಲಿ ವಿಚಾರಿಸುವುದರಿಂದ ವಿವರಗಳನ್ನು ಪಡೆಯಬಹುದು.

## ದೇವಾಲಯ ಕಲಾ ವಸ್ತು ಸಂಗ್ರಹಾಲಯ ಉದ್ಘಾಟನೆ

ತಿ. ತಿ. ದೇ. ಗಳ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ ಕಲಾ ವಸ್ತು ಸಂಗ್ರಹಾಲಯವು ಶ್ರೀ ಗೋವಿಂದರಾಜಸ್ವಾಮಿ ಗುಡಿಯ ಬಲಬದಿಯ ಕಚೇರಿ ನಮ್ಮಾಳ್ವಾರ್ ದೇವಾಲಯದಲ್ಲಿ ವ್ಯವಸ್ಥಿತಗೊಂಡು ಜುಲೈ 15 ರಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ ಅವರಿಂದ ಉದ್ಘಾಟಿತವಾಯಿತು.

ದೇವಾಲಯ ಕಲೆಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಚಿತ್ರಗಳು, ಶಿಲ್ಪಗಳು, ಮಾದರಿಗಳ ಮೂಲಕ ಪರಿಚಯ ಮಾಡಿಸಿಕೊಡುವ ಈ ವಸ್ತು ಸಂಗ್ರಹಾಲಯ ದೇವಾಲಯ ನಿರ್ಮಾಣಕ್ಕೆ ನಿವೇಶನದ ಆಯ್ಕೆಯಿಂದ ಹಿಡಿದು ಅರ್ಚನೆಯ ಪರಿಕರಗಳು, ಹೋಮಕುಂಡಗಳ ವಿವಿಧ ಬಗೆಗಳು ವಿಮಾನಗಳ ವಿವಿಧ ಬಗೆಗಳು, ವೈಷ್ಣವ ತತ್ತ್ವದ ಬೆಳವಣಿಗೆ ಮೊದಲಾದುವನ್ನು ವಿವರ ಪೂರ್ಣವಾಗಿ ತಿಳಿಸುತ್ತದೆ.

ಈ ವಸ್ತು ಸಂಗ್ರಹಾಲಯ ಬೆಳಗ್ಗೆ 8ರಿಂದ ರಾತ್ರಿ ಎಂಟರವರೆಗೆ ತೆರೆದಿರುವುದಾಗಿ, ಪ್ರವೇಶ ಶುಲ್ಕ ಹಿರಿಯರಿಗೆ ರೂ. 1-00 ಆಗಿಯೂ ಕಿರಿಯರಿಗೆ ರೂ 0–50 ಆಗಿಯೂ ಇರುತ್ತದೆ.

ಉದ್ಘಾಟನಾ ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಆಗಮಿಸಿದ ಶ್ರೀ ಪದ್ಮಾವತೀ ಮಹಿಳಾ ವಿಶ್ವವಿದ್ಯಾನಿಲಯದ ಉಪಕುಲಪತಿ ಶ್ರೀಮತಿ ವನಜಾ ಅಯ್ಯಂಗಾರ್ ಅವರು ವಸ್ತುಸಂಗ್ರಹಾಲಯದ ಪ್ರದರ್ಶನವನ್ನು ಮನಸಾರೆ ಮೆಚ್ಚಿಕೊಂಡು ನಮ್ಮ ಪರಂಪರೆಯ ಪರಿಚಯವನ್ನು ಶ್ರೀಸಾಮಾನ್ಯನಿಗೆ ಮಾಡಿಕೊಡುವಲ್ಲಿ ಈ ಸಂಗ್ರಹಾಲಯ ಬಹುಮುಖ್ಯ ಪಾತ್ರ ವಹಿಸಬಲ್ಲದು ಎನ್ನುತ್ತ ಹೀಗೊಂದು ಹಿಂದೂ ದೇವಾಲಯ ಕಲಾ ವಸ್ತು ಸಂಗ್ರಹಾಲಯ ಇರುವುದೆಂಬ ಬಗ್ಗೆ ವ್ಯಾಪಕವಾದ ಪ್ರಚಾರ ನಡೆದಲ್ಲಿ ಮಾತ್ರವೇ ಇದರ ಉದ್ದೇಶ ಸಾರ್ಥಕವಾಗುವುದೆಂದೂ ನುಡಿದರು.

ಅನೌಪಚಾರಿಕವಾಗಿ ಪತ್ರಕರ್ತರೊಡನೆ ಮಾತನಾಡುತ್ತ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಕುಮಾರ ಸ್ವಾಮಿರೆಡ್ಡಿಯವರು ಈ ಸಂಗ್ರಹಾಲಯ ಮುಂದೆ ಮುಂದೆ ಇನ್ನೂ ಹೆಚ್ಚಿನ ವಸ್ತುಗಳನ್ನು ಹೊಂದಿ ಇಡೀ ಭಾರತದಲ್ಲೇ ಮಾದರಿ ವಸ್ತು ಸಂಗ್ರಹಾಲಯವಾಗುವುದೆಂದು ನುಡಿಯುತ್ತ ಈಗಾಗಲೇ ಇತರತ್ರ ಸಿಗದ ವಿವರಗಳಿಂದ ಇದು ತುಂಬಿದೆ ಎಂದು ತಿಳಿಸಿದರು.

ಉದ್ಘಾಟನೆಯ ಹಾಗೂ ಕಲಾವಸ್ತು ಸಂಗ್ರಹಾಲಯದ ಹಲವು ಚಿತ್ರಗಳನ್ನು ಒಳ ರಕ್ಷಾಪುಟಗಳಲ್ಲಿ ನೋಡಬಹುದು.

## ಆಣಿವರ ಆಸ್ಥಾನ

ಆಣಿವರ ಆಸ್ಥಾನ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ವರ್ಷಕ್ಕೊಮ್ಮೆ ಸೂರ್ಯ ಕರ್ಕಾಟಕವನ್ನು ಸೇರಿ ಮುಂದುವರೆಯುವಾಗ ನಡೆಯುವ ಆಸ್ಥಾನ. ಇಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಪರಂಪರೆಯ ನಂಬಿಕೆಯಂತೆ ತನ್ನ ವಿವಾಹಕ್ಕಾಗಿ ಕುಬೇರನ ಬಳಿ ಪಡೆದ ಸಾಲವನ್ನು ತೀರಿಸಲು ಅದರ ಮೇಲಿನ ಬಡ್ಡಿಯನ್ನು ನೀಡಲು, ಬದ್ಧನಾಗುತ್ತಾನೆ. ಈ ಆಸ್ಥಾನದಲ್ಲಿ ಹಿಂದಿನ ವರ್ಷದ ದೇವಾಲಯದ ಆಯವ್ಯಯಗಳ ತೀರ್ಮಾನವಾಗಿ ಮುಂದಿನ

## 1983
## ಸೆಪ್ಟಂಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 1 | ಗುರುವಾರ | ಶ್ರೀ ವೆಂಕಟೇಶ್ವರಸ್ವಾಮಿಯವರ ಉಟ್ಲ ಉತ್ಸವ, |
| 2 | ಶುಕ್ರವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿಯವರ ಉಟ್ಲ ಉತ್ಸವ. |
| [illegible] | ಶನಿವಾರ | ತಿರುಪತಿ ಶ್ರೀ ಗೋವಿಂದರಾಜಸ್ವಾಮಿಯವರ ಉಟ್ಲ ಉತ್ಸವ. |
| 9 | ಶುಕ್ರವಾರ | ವರಾಹ ಜಯಂತಿ – ಸಾಮವೇದೋಪಾಕರ್ಮ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ, |
| 10 | ಶನಿವಾರ | ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ. ವಿನಾಯಕ ಚತುರ್ಥಿ. |
| 11 | ಭಾನುವಾರ | ಋಷಿ ಪಂಚಮಿ. |
| 14 | ಬುಧವಾರ | ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಗರುಡೋತ್ಸವ. |
| 17 | ಶನಿವಾರ | ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ರಥೋತ್ಸವ. |
| 18 | ಭಾನುವಾರ | ವಾಮನ ಜಯಂತಿ, ಶ್ರವಣ ದ್ವಾದಶಿ. ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಧ್ವಜಾವರೋಹಣ. |
| 21 | ಬುಧವಾರ | ಅನಂತ ಪದ್ಮನಾಭ ವ್ರತ. |
| 28 | ಬುಧವಾರ | ವ್ಯತೀಪಾತ ಮಹಾಲಯ. |

**ಮುಂದಿನ ಸಂಚಿಕೆಯಲ್ಲಿ .... .... ...**

**ಸಪ್ತಗಿರಿ ಸೆಪ್ಟಂಬರ್ — 1983**

**ವಾಮನ ತ್ರಿವಿಕ್ರಮ**
– ಎಸ್. ನರಸಿಂಹಾಚಾರ್ಯ

**ತಮಿಳುನಾಡಿನ ಮೂವರು ಸಂತರು**
– ಕಂದಾಡೈ ಕೇಶವನ್

**ಸತಿಪತಿಯರೊಂದಾದ ಭಕ್ತಿ**
– ಭಾರ್ಗವಿಶ್ರೀ

**ಜಗನ್ನಾಥದಾಸರ ಕೊಡುಗೆ**
– ವ್ಯಾಸನಕೆರೆ ಪ್ರಭಂಜನ

**ಯೋಗದ ಸಂಕ್ಷಿಪ್ತ ಪರಿಚಯ**
– ಎ. ಶಂಕರ

**ಕಾರಂಜಿ ಆಂಜನೇಯ**
– ಸುಮನ ಬದರೀನಾಥ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

ವರ್ಷಕ್ಕಾಗಿ ಹೊಸ ಲೆಕ್ಕದ ಹೊಸ ಕಡತಗಳನ್ನು ಆರಂಭಿಸಲಾಗುತ್ತದೆ ಶ್ರೀ ವೆಂಕಟೇಶ್ವರಸ್ವಾಮಿಯ ಪರವಾಗಿ ಪ್ರತಿ ವರ್ಷವೂ ದೇವಾಲಯದ ಕಾರ್ಯನಿರ್ವಹಣಾಧಿಕಾರಿ ಯಾತ್ರಿಕರ ಸೇವೆಗೆ ಬದ್ಧರಾಗುವುದು ನಡೆದು ಬಂದಿರುವ ಆಚಾರ. ಈ ಆಸ್ಥಾನದಲ್ಲಿ ವಿಧಿವತ್ತಾಗಿ ದೇವಾಲಯದ ಸರ್ಕಾರ್ ಮೊಹರನ್ನು ಕಾರ್ಯನಿರ್ವಹಣಾಧಿಕಾರಿಗಳಿಗೆ ನೀಡಲಾಗುವುದು.

ಈ ನಯನ ಮನೋಹರವಾದ ಆಸ್ಥಾನ ಈ ಬಾರಿ ಯಶಸ್ವಿಯಾಗಿ ನಡೆದು ಹೊಸ ಹೊಗರನ್ನು ಪಡೆಯಿತು. ಈ ಬಾರಿಯ ವಿಶೇಷವೆಂದರೆ ಅಂದು ನಡೆದ ಆಸ್ಥಾನದ ನಂತರ ಉತ್ಸವ ಮೂರ್ತಿಗಳನ್ನು ಪುಷ್ಪ ಪಲ್ಲಕ್ಕಿಯಲ್ಲಿ ತಿರುಮಲೆಯ ರಥ ಬೀದಿಗಳಲ್ಲಿ ಮೆರವಣಿಗೆ ನಡೆಸಿದ್ದು. ಅಸಂಖ್ಯ ಯಾತ್ರಿಕರ ಗೋವಿಂದ ನಾಮಸ್ಮರಣೆಯ ನಡುವೆ ವಿವಿಧ ಬಗೆಯ ಪುಷ್ಪಗಳಿಂದ ಅಲಂಕೃತವಾದ ಪಲ್ಲಕ್ಕಿ ರಥ ಬೀದಿಯಲ್ಲಿ ನಡೆಯುತ್ತಿದ್ದಂತೆ ನಂದನವನದ ಸುವಾಸನೆ ದೂರಕ್ಕೂ ಹರಡಿ ಇದೇ ವೈಕುಂಠವೆಂದು ಎಲ್ಲರನ್ನೂ ಬಳಿಗೆ ಕರೆಯುವಂತಿತ್ತು. ಸಹಸ್ರಸಂಖ್ಯೆ ಜನರು ದೇವರ ದರ್ಶನಮಾಡಿ ಆನಂದ ಹೊಂದಿದರು.

### ರಕ್ಷಾಪತ್ರ ಚಿತ್ರಸೂಚಿ

ಮುಖ ಪುಟದಲ್ಲಿ: ಶ್ರೀ ವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವದ ಮೋಹಿನೀ ಅವತಾರೋತ್ಸವ.

ಹಿಂಬದಿಯ ಪುಟದಲ್ಲಿ ; ವರಾಹ ಹಾಗೂ ವಾಮನಜಯಂತಿಗಳ ಅಂಗವಾಗಿ ವರಾಹ ವಾಮನ ವಿಗ್ರಹಗಳು.

ಒಳ ಪುಟಗಳಲ್ಲಿ: 1. ತಿರುಪತಿಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ಕಲಾ ವಸ್ತು ಸಂಗ್ರಹಾಲಯದ ಉದ್ಘಾಟನೆಯ ಹಾಗೂ ಸಂಗ್ರಹಾಲಯದ ಹಲವು ಶಿಲ್ಪಗಳ ಚಿತ್ರಗಳು ; 2. ತಿರುಪತಿಯ ರೈಲ್ವೆನಿಲ್ದಾಣದಲ್ಲಿ ತಿ.ತಿ.ದೇ. ವಾರ್ತಾ ಕೇಂದ್ರದ ಉದ್ಘಾಟನೆಯ ಚಿತ್ರ, ಆನಿವರ ಆಸ್ಥಾನದ ಸಂದರ್ಭದಲ್ಲಿ ನಡೆದ ಪುಷ್ಪ ಪಲ್ಲಕ್ಕಿ ಉತ್ಸವದ ಚಿತ್ರ.

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

